ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

## ಶ್ರೀಕಾಶೀನಾಥಗ್ರಂಥಮಾಲಾ

ಪಂಚಾಶಪುಷ್ಪ (೫೦)

# ಶ್ರೀಜಗದ್ಗುರು
# ಪಂಚಾಚಾರ್ಯರ ಪ್ರಾಚೀನತ್ವ


ಲೇಖಕರು ಮತ್ತು ಪ್ರಕಾಶಕರು

**ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರು**



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೮

ಬೆಲೆ ೧ ರೂ.

ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

## ಶ್ರೀಕಾಶೀನಾಥಗ್ರಂಥಮಾಲಾ

ಪಂಚಾಶಪುಷ್ಪ (೫೦)

# ಶ್ರೀಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ



ಲೇಖಕರು ಮತ್ತು ಪ್ರಕಾಶಕರು
ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರು



ಮೈಸೂರು
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
೧೯೪೬

ಬೆಲೆ ೧ ರೂ.

॥ ಶ್ರೀಜಗದ್ಗುರುಪಂಚಾಚಾರ್ಯಾಃ ಪ್ರಸೀದಂತು ॥

# ಪ್ರಸ್ತಾವನೆ

ವೀರಶೈವಧರ್ಮಶಾಸ್ತ್ರದಲ್ಲಿ ಮೋಕ್ಷಪ್ರಾಪ್ತಿಗೆ ಅಷ್ಟಾವರಣಗಳೇ ಮುಖ್ಯಸಾಧನಗಳೆಂದು ಹೇಳಲ್ಪಟ್ಟಿರುವ ವಿಷಯವು ಸುಪ್ರಸಿದ್ಧವೇ ಅದೆ. ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದ-ವಿಭೂತಿ-ರುದ್ರಾಕ್ಷ-ಮಂತ್ರ ಇವೇ ಅಷ್ಟಾವರಣಗಳು. ಇವುಗಳಲ್ಲಿ **ಗುರು-ಲಿಂಗ-ಜಂಗಮ** ಎಂಬೀ ಮೂರುವಸ್ತುಗಳು ಅತ್ಯಂತ ಮುಖ್ಯವಾಗಿರುತ್ತವೆ. ಪರಮಪೂಜ್ಯರಾಗಿರುವ ಈ ಗುರು-ಲಿಂಗ-ಜಂಗಮರ ಪ್ರಾಶಸ್ತ್ಯವನ್ನು ಸಕಲನಿಗಮಾಗಮಗಳು ಮುಕ್ತಕಂಠದಿಂದ ಸಾರುತ್ತಿದ್ದರೂ, ಇಂಗ್ಲಿಷ್ ಭಾಷಾಶಿಕ್ಷಣಪ್ರಭಾವದಿಂದ ನಾಸ್ತಿಕಮಯವಾಗಿರುವ ಈ ಕಾಲದಲ್ಲಿ ಬಹು ಜನರು ಪ್ರಾಚೀನಗ್ರಂಥ ಗಳನ್ನು ಒಪ್ಪುವುದೇ ಇಲ್ಲ. ಆದರೆ ಶಿಲಾಶಾಸನಗಳಲ್ಲಿ ಬಹಳ ವಿಶ್ವಾಸ ವನ್ನಿಟ್ಟು ಅವುಗಳನ್ನು ಮಾತ್ರ ಒಪ್ಪುತ್ತಿರುವರು. ಇದು ಭಾರತೀಯರ ದುರ್ದೈವವೆಂದೇ ಹೇಳಬೇಕಾಗಿದೆ.

ಕೆಲಜನ ಪರಮತೀಯರು ವೀರಶೈವರಿಗೆ ಪರಮಪೂಜ್ಯರಾಗಿರುವ ಗುರು-ಲಿಂಗ-ಜಂಗಮರ ವಿಷಯವು ಕ್ರಿ. ಶ. ೧೨ ನೆಯ ಶತಮಾನಕ್ಕಿಂತ ಪೂರ್ವದ ಶಾಸನಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲವೆಂದು ನುಡಿಯು ತ್ತಿರುವರು ಮತ್ತು ಬರೆಯುತ್ತಿರುವರು. ಇದಲ್ಲದೆ ಕ್ರಿ. ಶ. ೧೨ ನೆಯ ಶತಮಾನದಲ್ಲಿದ್ದ ಬಸವನ ಕಾಲದಿಂದೀಚೆಗೆ ಲಿಂಗಧಾರಣವನ್ನು ಮಾಡಿ ಕೊಂಡಿರುವ ಕೆಲಜನ ಬಸವಪಂಥಿಗಳು ಪರಮತೀಯರ ಈ ವಾದವನ್ನೇ ಸಮರ್ಥಿಸುತ್ತಿರುವರಲ್ಲದೆ, ಬಸವನಿಗಿಂತ ಪೂರ್ವದ ಯಾವ ಶಾಸನ ಗಳಲ್ಲಿಯೂ ಗುರು-ಲಿಂಗ-ಜಂಗಮರ ವಿಷಯವೇ ಬರುವುದಿಲ್ಲವೆಂದು

ಸರ್ವಜ್ಞಮೂರ್ತಿಗಳಂತೆ ಸಾರುತ್ತಿರುವರು. ಈ ರೀತಿ ಅರಣ್ಯಮಾರ್ಗವನ್ನು ಹಿಡಿದಿರುವ ಈ ಉಭಯಮಹಾಶಯರ ವಿತಂಡವಾದವು ಮಹಾ ಭ್ರಮಾತ್ಮಕವಾದುದೆಂಬುದನ್ನು ತೋರ್ಪಡಿಸುವ ಉದ್ದೇಶದಿಂದಲೇ ಈ ಗ್ರಂಥವು ರಚಿಸಲ್ಪಟ್ಟಿರುವದು.

ಈ ಗ್ರಂಥದಲ್ಲಿ ವೀರಶೈವಮತಕ್ಕೆ ಮುಖ್ಯಗುರುಗಳಾಗಿರುವ ಶ್ರೀಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವವೂ, ಈ ಮಹಾಚಾರ್ಯರಿಂದ ಸ್ಥಾಪಿತವಾದ ಲಿಂಗಧಾರಣದ ಪ್ರಾಚೀನತ್ವವೂ, ಪರಮಪೂಜ್ಯರಾಗಿರುವ ಜಂಗಮರ ಪ್ರಾಚೀನತ್ವವೂ ಅನೇಕ ಪ್ರಾಚೀನಶಾಸನಪ್ರಮಾಣಗಳಿಂದ ಪ್ರತಿಪಾದಿಸಲ್ಪಟ್ಟಿರುವದು. ಅಲ್ಲದೆ ಪಂಚಪೀಠಗಳ ಪ್ರಾಚೀನತ್ವದ ಬಗ್ಗೆ ಬನಾರಸ್ ಜಡ್ಜ್ ಕೋರ್ಟು, ಅಲಾಹಾಬಾದ್ ಹೈಕೋರ್ಟು ಮತ್ತು ಮದ್ರಾಸ್ ಹೈಕೋರ್ಟುಗಳ ತೀರ್ಮಾನಗಳೂ, ಪರಮತೀಯರಿಂದ ಮುದ್ರಿಸಿ ಪ್ರಕಟಿಸಲ್ಪಟ್ಟಿರುವ ಅನೇಕಪ್ರಾಚೀನಗ್ರಂಥಗಳ ಪ್ರಮಾಣಗಳೂ, ಮಿ॥ ಸಿ. ಪಿ. ಬ್ರೌನ್, ಮಿ॥ ಇ. ಥರ್ಸಟನ್, ಮಿ॥ ಜೆ. ಎನ್. ಫಾರ್ಕ್ಯುಹಾರ್ ಮೊದಲಾದ ಸುಪ್ರಸಿದ್ಧ ಯುರೋಪಿನ್ನರ ಗ್ರಂಥಪ್ರಮಾಣಗಳೂ, ಡಾ॥ ಆರ್. ಜಿ. ಭಾಂಡಾರಕರ್ ಇವರೇ ಮೊದಲಾದ ಅನೇಕಜನ ಸುಪ್ರಸಿದ್ಧ ಭಾರತೀಯರು ಬರೆದಿರುವ ಗ್ರಂಥಪ್ರಮಾಣಗಳೂ ಉದಾಹರಿಸಲ್ಪಟ್ಟಿರುವವು. ಆದುದರಿಂದ ಸಾರಾಸಾರವಿಚಾರಶೀಲರು ಈ ಗ್ರಂಥದಲ್ಲಿ ಪ್ರತಿಪಾದಿಸಿರುವ ಸಮಸ್ತವಿಷಯಗಳನ್ನೂ ನಿರ್ಮಲಹೃದಯದಿಂದ ಪರಿಶೀಲಿಸಿ, ಶ್ರೀಜಗದ್ಗುರುಪಂಚಾಚಾರ್ಯರು ಬಹುಪುರಾತನ ಕಾಲದವರೆಂದು ನಂಬಿ, ಶ್ರೀಪರಮೇಶ್ವರನ ಕೃಪೆಗೆ ಪಾತ್ರರಾಗಬೇಕೆಂದಾಶಿಸುತ್ತೇವೆ.

ಪ್ರಕಾಶಕರು.



ನಾಗನೂರು ಬೃಹನ್ಮಠಾಧ್ಯಕ್ಷರಾದ
ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರು

॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ಶ್ರೀಜಗದ್ಗುರು ರೇಣುಕಾಚಾರ್ಯರ ಪ್ರಾಚೀನತ್ವ



ಜೀಯಾಚ್ಛ್ರೀರೇಣುಕಾಚಾರ್ಯಃ ಶಿವಾಚಾರ್ಯಶಿಖಾಮಣಿಃ ।
ಯೋ ವೀರಶೈವಸಿದ್ಧಾಂತಂ ಸ್ಥಾಪಯಾಮಾಸ ಭೂತಲೇ ॥

ವೀರಶೈವಮತವು ಬಹುಪುರಾತನವಾದುದು. ಋಗಾದಿವೇದಗಳೂ, ಈಶಾದ್ಯುಪನಿಷತ್ತುಗಳೂ, ಕಾಮಿಕಾದಿ ಶಿವಾಗಮಗಳೂ, ವ್ಯಾಸೋಕ್ತ ಪುರಾಣಗಳೂ ಈ ಮಹಾಮತದ ಸ್ವರೂಪವನ್ನು ಸ್ಫುಟವಾಗಿ ಪ್ರತಿಪಾದಿಸುತ್ತಿರುವವು. ಈ ಸನಾತನಮತವನ್ನು ಜಗದಾದಿಯಲ್ಲಿ ಶ್ರೀರೇಣುಕಾದಿ ಪಂಚಾಚಾರ್ಯರು ಸ್ಥಾಪಿಸಿದರು. ಈ ಮಹಾತ್ಮರು ಪರಮೇಶ್ವರನ ಆಜ್ಞಾನುಸಾರವಾಗಿ ಪ್ರತಿಯೊಂದು ಯುಗದ ಆದಿಯಲ್ಲಿಯೂ ಶಿವಲಿಂಗಮುಖದಿಂದ ದಿವ್ಯದೇಹಧಾರಿಗಳಾಗಿ ಅವತರಿಸಿ, ಸರ್ವತ್ರ ಶಿವತತ್ತ್ವವನ್ನು ಪ್ರಕಾಶಪಡಿಸಿದರೆಂಬ ವಿಷಯವನ್ನು ಸಕಲ ಶಿವಾಗಮಗಳು ಮುಕ್ತಕಂಠದಿಂದ ಸಾರುತ್ತಿರುವವು. ಮಾರ್ಕಂಡೇಯನನ್ನುದ್ಧರಿಸುವದಕ್ಕೋಸ್ಕರ ಪರಮೇಶ್ವರನು ಲಿಂಗಮುಖದಿಂದ ಅವತರಿಸಿದಂತೆಯೂ, ಪ್ರಹ್ಲಾದನನ್ನು ಉದ್ಧರಿಸುವದಕ್ಕೋಸ್ಕರ ವಿಷ್ಣುವು ಸ್ತಂಭದಿಂದ ಅವತರಿಸಿದಂತೆಯೂ, ಮಾನವಕೋಟಿಯನ್ನುದ್ಧರಿಸುವದಕ್ಕೋಸ್ಕರ ಶ್ರೀಜಗದ್ಗುರು ರೇಣುಕಾದಿ

ಪಂಚಾಚಾರ್ಯರು ಶಿವಲಿಂಗಮುಖದಿಂದ ಅವತರಿಸಿ ಭೂಮಂಡಲದಲ್ಲಿ ಶಿವಭಕ್ತಿಯನ್ನು ಪ್ರತಿಷ್ಠಾಪಿಸಿದರು. ಶ್ರೀರೇಣುಕಾಚಾರ್ಯರು ನಿಜಾಮು ರಾಜ್ಯಕ್ಕೆ ಸೇರಿರುವ ಕುಲ್ಯಪಾಲ ಕ್ಷೇತ್ರದಲ್ಲಿರುವ ಶ್ರೀಸೋಮೇಶ್ವರಲಿಂಗ ದಿಂದ ಅವತರಿಸಿ, ಮೈಸೂರು ರಾಜ್ಯದಲ್ಲಿರುವ ಶ್ರೀರಂಭಾಪುರೀಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು. ಶ್ರೀದಾರುಕಾಚಾರ್ಯರು ಗ್ವಾಲ್ಹೇರ್ ರಾಜ್ಯಕ್ಕೆ ಸೇರಿರುವ ವಟಕ್ಷೇತ್ರದಲ್ಲಿ ಶ್ರೀಸಿದ್ಧೇಶ್ವರ ಲಿಂಗದಿಂದ ಅವತರಿಸಿ, ಉಜ್ಜಯಿನೀ ಮಹಾಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು. ಶ್ರೀಏಕೋರಾಮಾರಾಧ್ಯರು ಆಂಧ್ರದೇಶದ ಕಾಕಿನಾಡ ಡಿ॥ ದ್ರಾಕ್ಷಾ ರಾಮಕ್ಷೇತ್ರದಲ್ಲಿರುವ ಶ್ರೀಭೀಮೇಶ್ವರ (ಭೀಮನಾಥ) ಲಿಂಗದಿಂದ ಅವತರಿಸಿ, ಹಿಮವತ್ಕೇದಾರ ಕ್ಷೇತ್ರ ದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು. ಶ್ರೀಪಂಡಿತಾರಾಧ್ಯರು ಶ್ರೀಶೈಲಕ್ಷೇತ್ರದಲ್ಲಿರುವ ಶ್ರೀಮಲ್ಲಿಕಾರ್ಜುನ ಲಿಂಗದಿಂದ ಅವತರಿಸಿ, ಶ್ರೀಶೈಲಕ್ಷೇತ್ರದಲ್ಲಿಯೇ ಧರ್ಮಪೀಠವನ್ನು ಸ್ಥಾಪಿಸಿದರು. ಶ್ರೀವಿಶ್ವಾರಾಧ್ಯರು ಶ್ರೀಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಶ್ರೀವಿಶ್ವನಾಥಲಿಂಗದಿಂದ ಅವತರಿಸಿ, ಆ ಕ್ಷೇತ್ರದಲ್ಲಿಯೇ ಧರ್ಮಪೀಠ ವನ್ನು ಸ್ಥಾಪಿಸಿದರು. ಈ ಮಹಾಚಾರ್ಯರು ಸ್ಥಾಪಿಸಿದ ಧರ್ಮಪೀಠಗಳು, ಅನಾದಿಕಾಲದಿಂದ ಇಂದಿನವರೆಗೂ ಭರತಖಂಡದಲ್ಲಿ ರಾಜಾಧಿರಾಜಮಾನ್ಯ ಗಳಾಗಿ ವಿಶೇಷವೈಭವದಿಂದ ಮೆರೆಯುತ್ತಿರುವವು. ಈ ಪೂಜ್ಯಪಾದರು ಶ್ರುತಿ-ಸೂತ್ರಾದಿಗಳ ಮೇಲೆ ಶಿವಾದ್ವೈತಸಿದ್ಧಾಂತವನ್ನು ಸ್ಥಾಪಿಸಿರುವರು. ಈ ಐದು ಜನ ಆಚಾರ್ಯರ ಪ್ರಾಚೀನತ್ವವು ಈ ಗ್ರಂಥದಲ್ಲಿ ಪ್ರತಿಪಾದಿ ಸಲ್ಪಡುವದು. ಸದ್ಯಃ ಭಗವತ್ಪಾದ ಶ್ರೀಜಗದ್ಗುರು ರೇಣುಕಾಚಾರ್ಯರ ಪ್ರಾಚೀನತ್ವವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವದಾಗುವದು.

ಶ್ರೀಜಗದ್ಗುರು ರೇಣುಕಾಚಾರ್ಯರ ವಿಷಯದಲ್ಲಿ ಅನೇಕ ಜನ ಪ್ರಾಚೀನ ಕವಿಗಳು ಸಂಸ್ಕೃತ, ಕರ್ಣಾಟಕ, ಆಂಧ್ರ, ದ್ರಾವಿಡ, ಮಹಾ ರಾಷ್ಟ್ರ ಭಾಷೆಗಳಲ್ಲಿ ಕಾವ್ಯಗಳನ್ನೂ ಪುರಾಣಗಳನ್ನೂ ಚಂಪೂಗ್ರಂಥ

ಗಳನ್ನೂ ರಚಿಸಿರುವರು. ಆ ಗ್ರಂಥಗಳಲ್ಲೆಲ್ಲಾ ಸಿದ್ಧಾಂತ ಶಿಖಾ ಮಣಿಯು ಬಹುಪುರಾತನವಾದುದು. ಈ ಸಿದ್ಧಾಂತಶಿಖಾಮಣಿಗೆ "ರೇಣುಕಾಗಸ್ತ್ಯ ಸಂವಾದ "ವೆಂಬ ಬೇರೊಂದು ಹೆಸರುಂಟು. ಈ ಮಹಾ ಗ್ರಂಥದಲ್ಲಿ ಶ್ರೀರೇಣುಕಾಚಾರ್ಯರು, ಅಗಸ್ತ್ಯಮಹರ್ಷಿಗಳಿಗೆ ವೀರಶೈವ ತತ್ತ್ವವನ್ನುಪದೇಶಿಸಿದ ವಿಷಯವು ಉಕ್ತವಾಗಿರುವದು. ಅಲ್ಲದೆ, ಆ ಗ್ರಂಥದ ಅಂತ್ಯಭಾಗದಲ್ಲಿ ವಿಭೀಷಣನ ಪ್ರಾರ್ಥನಾನುಸಾರವಾಗಿ ಮೂರು ಕೋಟಿ ಗುರುರೂಪವನ್ನು ಧರಿಸಿ ಮೂರುಕೋಟಿಶಿವಲಿಂಗಗಳನ್ನು ಒಂದೇ ಮುಹೂರ್ತದಲ್ಲಿ ಸ್ಥಾಪಿಸಿದ ವಿಷಯವು ಬರೆಯಲ್ಪಟ್ಟಿರುವದು. ಈ ಮಹಾ ಚಾರ್ಯರು ಅಗಸ್ತ್ಯ ಮತ್ತು ವಿಭೀಷಣ ಇವರಿಬ್ಬರನ್ನೂ ಉದ್ಧರಿಸಿದ ವಿಷಯವು, ಇವರ ವಿಷಯುಕವಾಗಿರುವ ಸಮಸ್ತಗ್ರಂಥಗಳಲ್ಲಿಯೂ ಏಕ ಮುಖವಾಗಿ ಹೇಳಲ್ಪಟ್ಟಿರುವದು. ಇದರಿಂದ ಇವರೀಲೀಲೆಗಳು ಕೃತ-ತ್ರೇತಾಯುಗಗಳಿಗೆ ಸಂಬಂಧಪಟ್ಟಿರುವವೆಂದು ಸ್ಪಷ್ಟವಾಗುವುದು.

ದ್ವಾಪರಯುಗದಲ್ಲಿಯೂ ಸಹ ಈ ಮಹಾಚಾರ್ಯರು ಅನೇಕ ಲೀಲೆಗಳನ್ನು ಆಚರಿಸಿರುವರು. ಶ್ರೀಶಂಕರನು ಕಿರಾತವೇಷವನ್ನು ತಾಳಿ ಲೋಕೈಕವೀರನಾದ ಅರ್ಜುನನೊಡನೆ ಯುದ್ಧಮಾಡಿದ ಸಮಯದಲ್ಲಿ, ಶಂಕರನ ಸಂಗಡವಿದ್ದ ಪ್ರಮಥಪರಿವಾರದಲ್ಲಿ ಶ್ರೀರೇಣುಕರೂ ಸಹ ಇದ್ದ ರೆಂಬ ವಿಷಯವು ಮಹಾಭಾರತದಿಂದ ತಿಳಿದುಬರುವುದು. ಮಹಾಭಾರತ ವನ್ನು ಕುಮಾರವ್ಯಾಸನೆಂಬ ಲೋಕಪ್ರಸಿದ್ಧ ಕವಿಯು ಕನ್ನಡಿಸಿರುವ ವಿಷಯವು ಸರ್ವರಿಗೂ ತಿಳಿದೇ ಇರುವುದು. ಈ ಮಹಾಕವಿಯು ತನ್ನಿಂದ ವಿರಚಿತವಾಗಿರುವ ಮಹಾಭಾರತದ ಅರಣ್ಯಪರ್ವದ ೫ನೆಯ ಸಂಧಿಯಲ್ಲಿ—

ದೇವನನುರೂಪದಲಿ ನಿಂದರು ।
ದೇವಿಯುರು ಗುಹಗಣಪತಿಗಳೆ ।
ಲ್ಲಾ ವಿನೋದವ ನೋಡಿ ಧರಿಸಿದರೊಲಿದು ಶಾಬರವ ॥

ಆ ವಿಗಡ ನಂದೀಶ ವೀರಕ ।
ದೇವಲಕ ರೇಣುಕ ಮಹೋದರ ।
ದಾವಶಿಖಿಮುಖ ವೀರಭದ್ರಾದ್ಯಖಿಲಭೂತಗಣ ॥೩೦॥

ಶಂಕರನು ಅರ್ಜುನನೊಡನೆ ಶಬರವೇಷವನ್ನು ಧರಿಸಿದಂತೆ ಶಕ್ತಿ, ಷಣ್ಮುಖ, ಗಣಪತಿ, ನಂದೀಶ್ವರ, ವೀರಕ, ದೇವಲಕ, ರೇಣುಕ, ಮಹೋದರ, ದಾವಶಿಖಿ, ವೀರಭದ್ರ ಮತ್ತು ಸಮಸ್ತ ಭೂತಸಮೂಹ ಇವರೆಲ್ಲರೂ ವಿನೋದದಿಂದ ಶಬರವೇಷವನ್ನು ಧರಿಸಿದರೆಂದು ವರ್ಣಿಸಿದ್ದಾನೆ. ಇದರಿಂದ ಶ್ರೀರೇಣುಕರು ಪಾಂಡವರ ಕಾಲದಲ್ಲಿಯೂ ಇದ್ದರೆಂಬುದು ಸ್ಪಷ್ಟವಾಗುತ್ತದೆ.

ಇದರಂತೆಯೇ ಈ ಆಚಾರ್ಯರು ಕಲಿಯುಗದಲ್ಲಿಯೂ ಅವತರಿಸಿ ಅನೇಕಲೀಲೆಗಳನ್ನು ಆಚರಿಸಿರುವರು. ಈಗ್ಗೆ ೨೦೦೦ ವರ್ಷಗಳ ಪೂರ್ವದಲ್ಲಿ ಉಜ್ಜಯಿನೀ ಪಟ್ಟಣದಲ್ಲಿದ್ದು ಶಕಪುರುಷನೆಂದು ಜಗದ್ವಿಖ್ಯಾತನಾಗಿರುವ ವಿಕ್ರಮ ಮಹಾರಾಜನಿಗೆ ಖಡ್ಗವನ್ನಾಶೀರ್ವದಿಸಿದರು. ಕುಟಿಲಸಿದ್ಧನಾದ ಗೋರಕ್ಷನ ಗರ್ವವನ್ನು ನಾಶಮಾಡಿ ಅವನಿಗೆ ಶಿವತತ್ತ್ವೋಪದೇಶವನ್ನು ಮಾಡಿದರು. ಶ್ರೀಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗವನ್ನೂ ರತ್ನಗರ್ಭಗಣಪತಿಯನ್ನೂ ಅನುಗ್ರಹಿಸಿದರು. ಈ ವಿಷಯವು ಪೂರ್ವಕಾಲದಲ್ಲಿ ಶೃಂಗೇರಿಮಠಾಧಿಪತಿಗಳಿಂದ ಬರೆಯಿಸಲ್ಪಟ್ಟಿರುವ "ಗುರುವಂಶಕಾವ್ಯ"ದ ೩ ನೆಯ ಸರ್ಗದಲ್ಲಿ ಸ್ಪಷ್ಟವಾಗಿ ಬರೆಯಲ್ಪಟ್ಟಿರುವದಲ್ಲದೆ, ಶಿವತತ್ತ್ವರತ್ನಾಕರ, ವೇದಾಂತಸಾರವೀರಶೈವಚಿಂತಾಮಣಿ, ರೇಣುಕವಿಜಯ-ಮೊದಲಾದ ಗ್ರಂಥಗಳಲ್ಲಿಯೂ ಉಕ್ತವಾಗಿರುವದು. ಇದೇ ರೀತಿಯಾಗಿ ಈ ಮಹಾತ್ಮರು ಭೂಮಂಡಲದಲ್ಲಿ ಅನೇಕ ಲೀಲೆಗಳನ್ನಾಚರಿಸಿ ಸುಪ್ರಸಿದ್ಧರಾಗಿರುವರು. ಈ ಮಹಾತ್ಮರ ಹೆಸರಿನ ದೇವಸ್ಥಾನಗಳೂ ಸಹ ಭರತಖಂಡದ ನಾನಾಭಾಗಗಳಲ್ಲಿ ಬಹುಪುರಾತನಕಾಲದಿಂದಲೂ ವಿರಾಜಿಸುತ್ತಿರುವುವು. ನನಗೆ ತಿಳಿದಿರುವ

ಮಟ್ಟಿಗೆ ಈ ಮಹಾತ್ಮರ ಹೆಸರಿನಿಂದ ಪ್ರಸಿದ್ಧವಿರುವ ಪವಿತ್ರಕ್ಷೇತ್ರಗಳ ವಿಷಯವನ್ನು ವಿವರಿಸುವುದಾಗುವುದು.

(೧) **ಕುಲ್ಯಪಾಕಕ್ಷೇತ್ರ**—ಇದು ಶ್ರೀಜಗದ್ಗುರು ರೇಣುಕಾಚಾರ್ಯರ ಅವತಾರಭೂಮಿ. ಈ ಪವಿತ್ರಕ್ಷೇತ್ರವು ನಿಜಾಂರಾಜ್ಯದಲ್ಲಿದ್ದು ಹೈದರಾಬಾದಿಗೆ ಸಮೀಪದಲ್ಲಿರುವ "ಆಲೇರ್" ಸ್ಟೇಷನ್ನಿಗೆ ೪ ಮೈಲು ದೂರದಲ್ಲಿರುವುದು. ಇದು ಆಂಧ್ರ (ತೆಲುಗು) ದೇಶ. ಈ ಕ್ಷೇತ್ರದಲ್ಲಿ ಶ್ರೀಮದಾಚಾರ್ಯಪಾದರು ಅವತರಿಸಿದ ಶ್ರೀಸೋಮನಾಥ ಲಿಂಗಮೂರ್ತಿಯ ಭವ್ಯವಾದ ದೇವಾಲಯವಿರುವುದಲ್ಲದೆ, ಆ ದೇವಾಲಯದಲ್ಲಿ ಆಚಾರ್ಯರ ಶಿಲಾವಿಗ್ರಹವು ಅನಾದಿಕಾಲದಿಂದ ವಿರಾಜಿಸುತ್ತಿರುವುದು.

(೨) **ಶ್ರೀರಂಭಾಪುರೀಕ್ಷೇತ್ರ**—ಈ ಕ್ಷೇತ್ರದಲ್ಲಿ ಶ್ರೀರೇಣುಕಾಚಾರ್ಯರ ಧರ್ಮಪೀಠವು ಅನಾದಿಕಾಲದಿಂದ ಮೆರೆಯುತ್ತಿರುವುದು. ಈ ಕ್ಷೇತ್ರವು ಮೈಸೂರು ಸೀಮೆಯ ಕಡೂರು ಡಿಸ್ಟ್ರಿಕ್ಟಿಗೆ ಶೇರಿದ ಬಾಳೆಹೊನ್ನೂರು ಗ್ರಾಮಕ್ಕೆ ೨ ಮೈಲು ದೂರದಲ್ಲಿರುವುದು. ಈ ಧರ್ಮಪೀಠವು ಕಡೂರು ಸ್ಟೇಷನ್ನಿಗೆ ೬೦ ಮೈಲು ದೂರದಲ್ಲಿರುವುದು. ಈ ಪೀಠದಲ್ಲಿ ಶ್ರೀವೀರೇಶನ, ಶ್ರೀಜಗದ್ಗುರು ರುದ್ರಮುನಿಶಿವಾಚಾರ್ಯರ ಮತ್ತು ಶ್ರೀರೇಣುಕಾಚಾರ್ಯರು ಶ್ರೀಶಂಕರಾಚಾರ್ಯರಿಗೆ ಶ್ರೀಚಂದ್ರಮೌಲೀಶ್ವರ ಲಿಂಗವನ್ನು ಅನುಗ್ರಹಿಸುವ ಸುಂದರ ಶಿಲಾವಿಗ್ರಹಗಳು ವಿರಾಜಿಸುತ್ತಿರುವವು.

(೩) **ರೇವಣಸಿದ್ಧೇಶ್ವರಬೆಟ್ಟ**—ಈ ಪರ್ವತವು ಬೆಂಗಳೂರು ಡಿ॥ ಕ್ಲೋಸ್‌ಪೇಟೆ ತಾಲೂಕಿನಲ್ಲಿ ಈ ಮಹಾತ್ಮರ ಪುಣ್ಯಾಭಿಧಾನದಿಂದ ಪರಿಶೋಭಿಸುತ್ತಿರುವುದು. ಈ ಪರ್ವತವು ಕ್ಲೋಸ್‌ಪೇಟೆ ಸ್ಟೇಷನ್ನಿಗೆ ೭ ಮೈಲು ದೂರದಲ್ಲಿರುವುದು. ಪರ್ವತಾಗ್ರದಲ್ಲಿ ಮಹಾಚಾರ್ಯರ

ಭವ್ಯವಾದ ಶಿಲಾವಿಗ್ರಹವಿರುವುದು. ಈ ದೇವಾಲಯವು ಮೈಸೂರು ಸರಕಾರದ ಆಡಳಿತದಲ್ಲಿದ್ದು ಪೂಜಾದಿಗಳು ಸಮರ್ಪಕವಾಗಿ ಸಾಗುತ್ತಿರುವವು. ಮೈಸೂರು ದೇಶದಲ್ಲೆಲ್ಲ ಇದು ಬಹಳ ಪ್ರಸಿದ್ಧಿಯನ್ನು ಪಡೆದಿರುವುದು.

(೪) ಶ್ರೀರೇವಣಸಿದ್ಧೇಶ್ವರದೇವಾಲಯ—ಈ ದೇವಾಲಯವು ಬೆಂಗಳೂರು ಡಿ|| ಶಿವಗಂಗಾಕ್ಷೇತ್ರದ ಪರ್ವತದ ಪೂರ್ವಭಾಗದಲ್ಲಿ ವಿರಾಜಿಸುತ್ತಿರುವುದು. ಇಲ್ಲಿ ಶ್ರೀಜಗದ್ಗುರು ರುದ್ರಮುನಿಶಿವಾಚಾರ್ಯರ ಭವ್ಯವಾದ ಶಿಲಾವಿಗ್ರಹವಿರುವುದು. ಈ ಕ್ಷೇತ್ರವು ಬೆಂಗಳೂರಿಗೆ ಸಮೀಪದಲ್ಲಿರುವ "ನಿಡವಂದ" ಸ್ಟೇಷನ್ನಿಗೆ ೫ ಮೈಲು ದೂರದಲ್ಲಿರುವುದು.

(೫) ಸಿದ್ಧರಬೆಟ್ಟ—ಈ ಬೆಟ್ಟವು ತುಮಕೂರು ಡಿಸ್ಟ್ರಿಕ್ಟಿನಲ್ಲಿರುವುದು. ಶ್ರೀರೇವಣಸಿದ್ಧಭಗವತ್ಪಾದರು ಈ ಬೆಟ್ಟದಲ್ಲಿ ಕೆಲಕಾಲ ಅನುಷ್ಠಾನಮಾಡಿದುದರಿಂದ ಈ ಬೆಟ್ಟವು ಈ ಮಹಾತ್ಮರ ಹೆಸರಿನಿಂದ ಪ್ರಸಿದ್ಧವಾಗಿರುವುದು. ಈ ಬೆಟ್ಟದಲ್ಲಿ ನಾನಾವಿಧವಾದ ಅಮೂಲ್ಯವನಸ್ಪತಿಗಳು ದೊರೆಯುವವು. ಆ ಪ್ರಾಂತದ ಜನರು ಈ ಬೆಟ್ಟದಲ್ಲಿ ವಾಸವಾಗಿದ್ದುಕೊಂಡು ಮಹಾಮಹಾರೋಗಗಳಿಂದ ಮುಕ್ತರಾಗುತ್ತಿರುವರು.

(೬) ರೇವಗಿ ಅಥವಾ ರೇವಣಗಿರಿ—ಈ ಕ್ಷೇತ್ರವು ನಿಜಾಂ ಇಲಾಖಾ ಗುಲ್ಬುರ್ಗಾ ಡಿ|| ರಟಗಲ್ಲ ಗ್ರಾಮಕ್ಕೆ ೨ ಮೈಲು ದೂರದಲ್ಲಿರುವುದು. ಪರ್ವತದ ಅಗ್ರಭಾಗದಲ್ಲಿ ಆಚಾರ್ಯರ ಹೆಸರಿನ ವಿಶಾಲವಾದ ದೇವಾಲಯವು ಕಂಗೊಳಿಸುತ್ತಿರುವುದು. ಇದು ಆಚಾರ್ಯಭಗವತ್ಪಾದರು ಪಾದವಿಟ್ಟ ಪವಿತ್ರಸ್ಥಳ. ಇದು ನಿಜಾಂ ರಾಜ್ಯದಲ್ಲೆಲ್ಲ ಅತ್ಯಂತ ಪ್ರಸಿದ್ಧಿಗೊಂಡ ಕ್ಷೇತ್ರವೆನಿಸಿರುವುದು. ಈ ಕ್ಷೇತ್ರಕ್ಕೆ ಸದಾ ಯಾತ್ರಿಕರು ಬಂದೇ ಬರುತ್ತಿರುವರು.

(೭) ರೇವಣಸಿದ್ಧೇಶ್ವರದೇವಾಲಯ—ಈ ದೇವಾಲಯವು ಬೊಂಬಾಯಿ ಇಲಾಖೆಗೆ ಸೇರಿರುವ ಸೊಲ್ಲಾಪುರನಗರದಲ್ಲಿ ಈ ಆಚಾರ್ಯರ ಹೆಸರಿನಿಂದ ಅನಾದಿಕಾಲದಿಂದ ವಿರಾಜಿಸುತ್ತಿರುವುದು. ಸೊಲ್ಲಾಪುರದ ಭಕ್ತರು ಲಕ್ಷಾಂತರರೂಪಾಯಿಗಳನ್ನು ಖರ್ಚುಮಾಡಿ ಈ ದೇವಾಲಯ ವನ್ನು ಜೀರ್ಣೋದ್ಧಾರಮಾಡಿರುವರು. ಇದು ಅತ್ಯಂತ ಮಹತ್ತ್ವಸ್ಥಳ ವಾಗಿರುವುದು.

(೮) ಶ್ರೀರೇವಣಸಿದ್ಧೇಶ್ವರದೇವಾಲಯ—ಈ ಮಹಾ ದೇವಾಲಯವು ಸೊಲ್ಲಾಪುರ ಡಿ॥ ಮಾಸನೂರುಗ್ರಾಮದಲ್ಲಿರುವ ಭೀಮಾ ನದಿಯ ದಂಡೆಯಮೇಲೆ ಬಹುಪುರಾತನಕಾಲದಿಂದಲೂ ವಿರಾಜಿಸುತ್ತಿರು ವುದು. ಈ ದೇವಾಲಯದ ಕಟ್ಟಡಕ್ಕೆ ಹತ್ತಿಪ್ಪತ್ತುಲಕ್ಷರೂಪಾಯಿಗಳು ಖರ್ಚಾಗಿರಬಹುದು. ಈ ಸ್ಥಳದಲ್ಲಿಯೇ ಶ್ರೀರೇಣುಕರು ೧೨ ಸಾವಿರ ಕನ್ಯೆಯರನ್ನು ಬಂಧವಿಮುಕ್ತರನ್ನಾಗಿ ಮಾಡಿ ಖರ್ಪರನ ಗರ್ವಭಂಗವನ್ನು ಮಾಡಿದರು. ಯಕ್ಷಮಿಥುನವನ್ನು ತಮ್ಮ ಫಾಲನೇತ್ರದಿಂದ ಧ್ವಂಸ ಮಾಡಿದ ಸ್ಥಳವೂ ಇದೇ ಆಗಿರುವುದು. ಇದು ಅತ್ಯಂತ ಮಹತ್ತ್ವಸ್ಥಳ. ಶ್ರೀರೇವಣಸಿದ್ಧೇಶ್ವರನ ಪೂಜೆಗಾಗಿ ಬ್ರಿಟಿಷ್ ಸರಕಾರದವರು ಪ್ರತಿವರ್ಷ ೧೨೦೦ ರೂಪಾಯಿಗಳನ್ನು ಸಲ್ಲಿಸುತ್ತಿರುವರು.

(೯) ರೇವಣಸಿದ್ಧೇಶ್ವರದೇವಾಲಯ—ಈ ದೇವಾಲಯವು ಸೊಲ್ಲಾಪುರ ಡಿ॥ ಫಂಡರಪುರಕ್ಕೆ ೧೨ ಮೈಲು ದೂರದಲ್ಲಿರುವ ಮಂಗಳ ವೇಢೆ ಎಂಬ ಗ್ರಾಮದಲ್ಲಿ ಪುರಾತನಕಾಲದಿಂದ ವಿರಾಜಿಸುತ್ತಿರುವುದು.

(೧೦) ಶ್ರೀರೇವಣಸಿದ್ಧೇಶ್ವರದೇವಾಲಯ—ಈ ದೇವಾ ಲಯವು ಬೊಂಬಾಯಿ ಇಲಾಖಾ ಸಾತಾರಾ ಡಿ॥ ವಿಟಾತಾಲೂಕಿಗೆ ಶೇರಿದ "ರೇಣಾವಿ" ಎಂಬ ಗ್ರಾಮದಲ್ಲಿ ಶೋಭಿಸುತ್ತಿರುವುದು. ಇದು ಅತ್ಯಂತ ಮಹತ್ತ್ವಸ್ಥಳ. ಆ ಪ್ರಾಂತದ ಜನರು ಈ ದೇವಾಲಯದ ವಿಷಯದಲ್ಲಿ ವಿಶೇಷ ಭಕ್ತಿಯಿಂದ ನಡೆದುಕೊಳ್ಳುತ್ತಿರುವರು.

(೧೧) ರೇವಣಸಿದ್ಧನಗುಡ್ಡ—ಈ ಗುಡ್ಡವು ಕೊಲ್ಲಾಪುರ ರಾಜ್ಯದಲ್ಲಿ ವಿರಾಜಿಸುತ್ತಿರುವುದು. ಈ ಪುಣ್ಯಕ್ಷೇತ್ರವು ಬೆಳಗಾಂವ ಡಿಸ್ಟ್ರಿಕ್ಟ್ ಬೆಲ್ಲದಬಾಗೇವಾಡಿ ಸ್ಟೇಷನ್ನಿಗೆ ೧೨ ಮೈಲು ದೂರದಲ್ಲಿರುವುದು. ಪರ್ವತದ ಸಾನುಪ್ರದೇಶದಲ್ಲಿ ಶ್ರೀರೇವಣಸಿದ್ಧೇಶ್ವರನ ದೇವಾಲಯವಿರುವದು. ಅಲ್ಲಿ ಶ್ರೀರೇಣುಕಾಚಾರ್ಯರ ಪಾದದ ಗುರುತುಗಳಿರುವವು. ಕೊಲ್ಲಾಪುರ ಸರಕಾರದವರು ಪೂಜಾದಿಗಳಿಗಾಗಿ ಭೂಮಿಯನ್ನು ದಾನ ಮಾಡಿರುವರು. ಇದು ಅತ್ಯಂತ ಪ್ರಾಚೀನ ದೇವಾಲಯ. ಭಗವತ್ಪಾದರು ಹಿಂದಕ್ಕೆ ಕೊಲ್ಲಾಪುರದಲ್ಲಿದ್ದ ಗೋರಕ್ಷನ ಗರ್ವಹರಣ ಮಾಡುವುದಕ್ಕಾಗಿ ದಯಮಾಡಿಸಿದ ಕಾಲದಲ್ಲಿ ಈ ಸ್ಥಾನದಲ್ಲಿ ಅನುಷ್ಠಾನಮಾಡಿದರೆಂಬ ಐತಿಹ್ಯವಿದೆ.

(೧೨) ಶ್ರೀರೇವಣಸಿದ್ಧೇಶ್ವರದೇವಾಲಯ—ಮದ್ರಾಸ್ ಇಲಾಖಾ ಕೊಯಮುತ್ತೂರು ಡಿ|| ಕೊಳ್ಳೆಗಾಲ ತಾ|| ಹರಳಿಗ್ರಾಮಕ್ಕೆ ೧ ಮೈಲು ದೂರದಲ್ಲಿರುವ ಕಾವೇರೀ ನದಿಯ ತೀರದಲ್ಲಿ ಈ ಮಹಾತ್ಮರ ಹೆಸರಿನ ದೇವಾಲಯವಿರುವದು. ಅನೇಕರು ಮಂತ್ರಸಿದ್ಧಿಗಾಗಿ ಈ ದೇವಸ್ಥಾನದಲ್ಲಿ ಅನುಷ್ಠಾನಮಾಡಿ ಮಂತ್ರಸಿದ್ಧಿಯನ್ನು ಪಡೆದುಕೊಳ್ಳುವರು.

(೧೩) ರೇವಣತಲಾವ—ಈ ಪವಿತ್ರತೀರ್ಥವು ಹಿಮಾಲಯದಲ್ಲಿರುವ ಶ್ರೀಜಗದ್ಗುರು ಏಕೋರಾಮಾರಾಧ್ಯರ ಧರ್ಮಪೀಠಕ್ಕೆ (ಉಷಾಮಠಕ್ಕೆ) ೨ ಮೈಲು ದೂರದಲ್ಲಿ ಈ ಮಹಾಚಾರ್ಯರ ಪವಿತ್ರಾಭಿಧಾನದಿಂದ ಪ್ರಸಿದ್ಧವಾಗಿರುವುದು. ಶ್ರೀರೇಣುಕಾಚಾರ್ಯರು ಹಿಮಾಲಯಕ್ಕೆ ದಯಮಾಡಿಸಿದ್ದಾಗ್ಗೆ ಈ ತೀರ್ಥದಲ್ಲಿ ಸ್ನಾನಮಾಡಿದ್ದರಿಂದ ಅದಕ್ಕೆ ಈ ಹೆಸರು ಪ್ರಾಪ್ತವಾಗಿರುವುದು.

(೧೪) ಮದ್ರಾಸ್ ಇಲಾಖಾ ನಾರ್ಥ್‌ಆರ್ಕಾಟ್ ಡಿ|| ತಿರುವಣ್ಣಾಮಲೆ (ಅರುಣಾಚಲ) ಕ್ಷೇತ್ರದಲ್ಲಿರುವ ಪರ್ವತದ ಮಧ್ಯಭಾಗದಲ್ಲಿ

ಈ ಮಹಾತ್ಮರ ಹೆಸರಿನ ಪ್ರಸಿದ್ಧ ದೇವಾಲಯವಿರುವುದು. ದೇವಾಲಯದ ಮುಂಭಾಗದಲ್ಲಿ ಪವಿತ್ರ ತೀರ್ಥವುಂಟು. ಈ ಕ್ಷೇತ್ರದಲ್ಲಿ ಶ್ರೀರೇಣುಕಭಗವತ್ಪಾದರು ವಾಸವಾಗಿದ್ದರೆಂಬ ವಿಷಯವು ಅವರ ಪವಿತ್ರ ಚರಿತ್ರಗಳಿಂದ ತಿಳಿದುಬರುತ್ತದೆ. ಇದು ತಮಿಳುದೇಶ. ಇಲ್ಲಿ ಅರುಣಾಚಲೇಶ್ವರನ ಮಹಾ ದೇವಾಲಯವಿರುವುದು.

(೧೫) ಮದ್ರಾಸ್ ಇಲಾಖಾ "ವೃದ್ಧಾಚಲ" ಕ್ಷೇತ್ರದಲ್ಲಿ ಈ ಮಹಾತ್ಮರ ಹೆಸರಿನ ದೇವಾಲಯವಿರುವುದು. ಇದು ತಮಿಳು ದೇಶ. ಸೌತ್‌ಇಂಡಿಯನ್ ರೈಲ್ವೆ ಮಾರ್ಗದಲ್ಲಿರುವುದು. ಈ ಕ್ಷೇತ್ರದಲ್ಲಿ ಆಚಾರ್ಯ ಭಗವತ್ಪಾದರು ಅನುಷ್ಠಾನಮಾಡಿರುವರೆಂಬ ವಿಷಯವು ಅವರ ಚರಿತ್ರ ಗಳಿಂದ ತಿಳಿದುಬರುತ್ತದೆ.

(೧೬) ಪೂರ್ವಕಾಲದಲ್ಲಿ ದಕ್ಷಿಣದೇಶವನ್ನು ಏಕಚ್ಛತ್ರಾಧಿಪತ್ಯ ದಿಂದ ಆಳುತ್ತಿದ್ದ ಪಲ್ಲವ ಮತ್ತು ಚೋಳವಂಶದ ಚಕ್ರವರ್ತಿಗಳಿಗೆ ರಾಜ ಧಾನಿಯಾಗಿದ್ದ ಕಾಂಚೀಕ್ಷೇತ್ರದಲ್ಲಿ ಇವರು ಬಹುಕಾಲ ವಾಸವಾಗಿದ್ದರು. ಶ್ರೀರೇಣುಕಾಚಾರ್ಯರು ಈ ಕ್ಷೇತ್ರದಲ್ಲಿರುವ ವರದರಾಜ ನಾಮಕ ವಿಷ್ಣು ಮೂರ್ತಿಯು ಚಲಿಸುತ್ತಿದ್ದ ಮಸ್ತಕವನ್ನು ತಮ್ಮ ಮಹಿಮಪ್ರಭಾವದಿಂದ ನಿಲ್ಲಿಸಿ, ಚೋಳಭೂಪಾಲನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು. ಶ್ರೀಜಗದ್ಗುರು ರುದ್ರಮುನೀಶ್ವರ ಶಿವಾಚಾರ್ಯರು ಈ ಕ್ಷೇತ್ರದಲ್ಲಿ ವಿರಾಜಿ ಸುತ್ತಿರುವ ಏಕಾಮ್ರೇಶ್ವರ ಲಿಂಗಮೂರ್ತಿಯ ಮುಂಭಾಗದ ಭೂಗರ್ಭ ದಿಂದವತರಿಸಿ, ಶ್ರೀರೇಣುಕರಿಂದ ದಿವ್ಯಜ್ಞಾನವನ್ನು ಪಡೆದುಕೊಂಡರು.

ಇದೇ ರೀತಿಯಾಗಿ ಈ ಮಹಾಚಾರ್ಯರ ಪವಿತ್ರನಾಮದಿಂದ ಇಂಡಿಯಾದೇಶದ ಅನೇಕ ಭಾಗಗಳಲ್ಲಿ ಅಸಂಖ್ಯ ದೇವಾಲಯಗಳು ಪ್ರಸಿದ್ಧ ವಾಗಿರುವುವು. ಈ ಮಹಾತ್ಮರು ವಿಶೇಷವಾಗಿ ತಮಿಳುದೇಶದಲ್ಲಿ ವಾಸ ವಾಗಿದ್ದರೆಂಬುದು ಅವರ ಚರಿತ್ರಗಳಿಂದ ತಿಳಿದುಬರುತ್ತದೆ. ತಮಿಳು

(ದ್ರಾವಿಡ) ದೇಶದ ಅನೇಕ ಭಾಗಗಳಲ್ಲಿ ಈ ಮಹಾತ್ಮರ ಹೆಸರಿನ ಅನೇಕ ದೇವಾಲಯಗಳಿರುವವೆಂದು ಪ್ರಸಿದ್ಧವದೆ. ಇದರಿಂದ ಈ ಮಹಾತ್ಮರ ಪವಿತ್ರನಾಮವು ಭರತಖಂಡದಲ್ಲಿ ಪ್ರಾಚೀನಕಾಲದಿಂದಲೂ ವಿಶೇಷ ಪ್ರಚಾರದಲ್ಲಿರುವದೆಂದು ಸ್ಪಷ್ಟವಾಗಿ ತೋರಿಬರುವುದು. ಈ ವಿಷಯವು ಪ್ರಾಚೀನಶಿಲಾಶಾಸನಗಳಿಂದಲೂ ಸಹ ವ್ಯಕ್ತವಾಗುವುದು.

ಕ್ರಿ. ಶ. ೧೦ ನೆಯ ಶತಮಾನದಲ್ಲಿ ಚಾಲುಕ್ಯವಂಶದ ಕೊಟ್ಟಿಗ ದೇವ (ನಿತ್ಯವರ್ಷ) ನೆಂಬ ರಾಜನು ನಿಜಾಮು ರಾಜ್ಯದಲ್ಲಿರುವ ಮಳಖೇಡ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವನ್ನಾಳುತ್ತಿದ್ದ ಸಮಯದಲ್ಲಿ, ಪಂದಿಗನೆಂಬ ರಾಜನು ಅವನ ಸಾಮಂತರಾಜನಾಗಿ ಕರ್ಣಾಟಕದೇಶವನ್ನಾಳುತ್ತಿದ್ದನು. ಈ ಪಂದಿಗರಾಜನಿಗೆ " ಜಕ್ಕಿಸುಂದರಿ " ಎಂಬ ಹೆಂಡತಿಯಿದ್ದಳು. ಈ ಜಕ್ಕಿಸುಂದರಿಯು ಶಾಲಿವಾಹನ ಶಕ ೮೯೦ ನೆಯ ಪ್ರಭವನಾಮ ಸಂವತ್ಸರ ಪುಷ್ಯಮಾಸ ಉತ್ತರಾಯಣ ಪುಣ್ಯಕಾಲ ಸಂಕ್ರಾಂತಿಯ ದಿವಸ ದಾನಮಾಡಿರುವ ವಿಷಯವು ಚಿತ್ರದುರ್ಗ ತಾ॥ ಬೇವಿನಹಳ್ಳಿಗ್ರಾಮದ ಹನುಮಂತದೇವರ ಗುಡಿಯ ಪ್ರಾಕಾರದಲ್ಲಿರುವ ಒಂದು ಶಿಲಾಶಾಸನದಲ್ಲಿ ಹೇಳಲ್ಪಟ್ಟಿರುವದು. ಇದು ಚಿತ್ರದುರ್ಗ ತಾಲೂಕಿನ 74 ನೆಯ ನಂಬರಿನ ಶಾಸನವಾಗಿರುವದು. ಈ ಶಾಸನದಲ್ಲಿ ಪಂದಿಗ ರಾಜನ ವಂಶಾವಳಿಯು ವರ್ಣಿಸಲ್ಪಟ್ಟಿರುವದು. ಈ ವಂಶಾವಳಿಯಲ್ಲಿ ಪಂದಿಗರಾಜನಿಗೆ ಆರನೆಯ ತಲೆಯವನಾದ " ರೇವಣನಾಥ " ನೆಂಬ ರಾಜನ ಹೆಸರು ಉಲ್ಲಿಖಿತವಾಗಿರುವದು.

ಆ ವಿಭುಗಾತ್ಮಜಂ ನೆರೆಯೆ ಪುಟ್ಟಿಡೆ ಪುಟ್ಟಿದ ಪಿಳ್ಳಿಮಯ್ಯನಂ।
ತಾ ವಸುಧಾಧಿಪಂಗೆ ತನಯಂ ಕಲಿಕೊಂಕಣದೇವ ಸು . . . ಥ್ಯ॥
ಬ್ಬಾವನವಂಗೆ ಕೀರ್ತಿಯುತನಗ್ರಜನಾತನ ಸೂನು ದಾನಿ ತಾಂ।
ರೇವಣನಾಥನಾತನ ಮಗಂ ನೆಗಳ್ದಂ ಸಲೆ ರಾಜಭೂಭುಜಂ ॥

ಆತಂಗೆ ಬಿಕ್ಕಿಯಣ್ಣಂ ।
ಮಾತೆಗೆ ಸತ್ಪುತ್ರನಾಸುಪುತ್ರಂಗೆ ಸುತಂ ॥
ನೂತಗುಣಂ ಗೊಗ್ಗಿ ಗೊಗ್ಗಿಗ ।
ನೀತಂ ಶ್ರೀಸೂದ್ರಕಾಂಕನಾತಂಗೆ ಮಗಂ ॥

ಸಂದ ಮಹಾಸಾಮಂತಂ ।
ಪಂದಿಗನಾತ್ತಿತ್ತು ಮಿರಿದುಮಿಾ ಜಗದೊಳ್ ಸಂ ॥
ಕ್ರಂದನನಂದನಸದೃಶಂ ।
ನಿಂದಂ ನಿಜರಾಜ್ಯಪದವಿಯೊಳ್ ಸುಖದಿಂದಂ ॥

ಈ ಪದ್ಯಗಳಿಂದ ಪಂದಿಗರಾಜನ ತಂದೆಯು ಶೂದ್ರಕಾಂಕನೆಂದೂ, ಅವನ ತಂದೆಯು ಗೊಗ್ಗಿಯೆಂದೂ, ಅವನ ತಂದೆಯು ಬಿಕ್ಕಿಯಣ್ಣನೆಂದೂ, ಅವನ ತಂದೆಯು ರಾಜಭೂಭುಜನೆಂದೂ, ಅವನ ತಂದೆಯು ರೇವಣನಾಥನೆಂದೂ ವ್ಯಕ್ತವಾಗುವದು. ಇದರಿಂದ ರೇವಣನಾಥನೆಂಬ ರಾಜನು ಪಂದಿಗರಾಜನಿಗೆ ಆರನೆಯ ತಲೆಯವನೆಂದು ಸ್ಪಷ್ಟವಾಗುವದು. ಪ್ರತಿಯೊಬ್ಬರಿಗೆ 30 ವರ್ಷಗಳಂತೆ ಲೆಕ್ಕ ಹಾಕಿದರೂ ಪಂದಿಗರಾಜನಿಗಿಂತ ರೇವಣನಾಥರಾಜನು ೧೮೦ ವರ್ಷಗಳ ಪೂರ್ವದಲ್ಲಿದ್ದನೆಂದು ಸ್ಪಷ್ಟವಾಗುವದು. ಪಂದಿಗರಾಜನು ಶಾಲಿವಾಹನ ಶಕ ೮೯೦ ಅಂದರೆ ಕ್ರಿ. ಶ. ೯೬೮ ರಲ್ಲಿದ್ದನೆಂಬ ವಿಷಯವು ಈ ಶಾಸನದಿಂದಲೇ ತಿಳಿದುಬರುವದು. ಇದರಿಂದ ಪಂದಿಗರಾಜನಿಗೆ ಆರನೆಯ ತಲೆಯವನಾದ ರೇವಣನಾಥರಾಜನು ಸುಮಾರು ಕ್ರಿ. ಶ. ೭೮೦ ರಲ್ಲಿದ್ದನೆಂದು ತೋರಿಬರುವದು. ಈಗ್ಗೆ ಸುಮಾರು ೧೨೦೦ ವರ್ಷಗಳ ಪೂರ್ವದಲ್ಲಿದ್ದ ರಾಜನು ಈ ಮಹಾಚಾರ್ಯರ ಹೆಸರನ್ನಿಟ್ಟುಕೊಳ್ಳಬೇಕಾದರೆ ಆ ಕಾಲದಲ್ಲಿ ಈ ಭಗವತ್ಪಾದರ ತೇಜಸ್ಸು ಪ್ರಪಂಚದಲ್ಲೆಲ್ಲಾ ವ್ಯಾಪಿಸಿತ್ತೆಂದು ಧಾರಾಳವಾಗಿ ಹೇಳಬಹುದಾಗಿದೆ.

ಇದಲ್ಲದೆ ಮದ್ರಾಸ್ ಗವರ್ನಮೆಂಟನವರು ೧೯೩೯ ನೆಯ ಇಸವಿಯಲ್ಲಿ " ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್" (ವಾಲ್ಯೂಂ 9 ಭಾಗ I)

ಎಂಬ ಹೆಸರಿನಿಂದ ಕರ್ಣಾಟಕಶಾಸನಗಳಿಂದ ಕೂಡಿರುವ ಒಂದು ಪುಸ್ತಕ ವನ್ನು ಮುದ್ರಿಸಿ ಪ್ರಸಿದ್ಧಪಡಿಸಿದ್ದಾರೆ. ಆ ಪುಸ್ತಕದ ೧೧೪-೧೧೫ ನೆಯ ಪುಟದಲ್ಲಿ ಬಳ್ಳಾರಿ ಡಿ|| ಹರಪನಹಳ್ಳಿ ತಾ|| ಬಾಗಳಿಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿರುವ ಒಂದು ಶಾಸನವು ಮುದ್ರಿಸಲ್ಪಟ್ಟಿರುವದು.

ತ್ರೈಲೋಕ್ಯಮಲ್ಲನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಗದೇವ ನೆಂಬ ರಾಜನು ಬಳ್ಳಾರಿ ಡಿ|| ಕೂಡ್ಲಿಗಿ ತಾಲೂಕು ಕೋಗಳಿ ಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆ ಪ್ರಾಂತವನ್ನು ಆಳುತ್ತಿದ್ದ ಸಮಯ ದಲ್ಲಿ ಶಾಲಿವಾಹನ ಶಕ ೯೯೦ (ಕ್ರಿ. ಶ. ೧೦೬೮) ನೆಯ ಕೀಲಕಸಂವತ್ಸ ರದ ಜ್ಯೇಷ್ಠಮಾಸ ಪೂರ್ಣಿಮೆ ಸೋಮವಾರ ದಿವಸ ಮಹಾದೇವಯ್ಯ ನೆಂಬವನು ಒಂದು ವೃತ್ತಿಯನ್ನು ತೆಗೆದುಕೊಂಡು ಕೆರೆಗೆ ಕೊಟ್ಟಿರುವ ವಿಷಯವು ಆ ಶಾಸನದಲ್ಲಿ ಉಕ್ತವಾಗಿರುವದು.

ಆ ಶಾಸನದ ಕೊನೆಯಭಾಗದಲ್ಲಿ ಎರಡು ಕಂದಪದ್ಯಗಳು ಕೆತ್ತ ಲ್ಪಟ್ಟಿರುವವು. ಅದರಲ್ಲಿ—

" ಪುರುಡಿಸುವೊಡೆಲವೊ ರೇವಣಾರ್ಯನೊಳೆಂದುಂ "
" ನಿನ್ನಳವೊ ಚಿತ್ರದ ಕರದೊಳ್ಪಂ ಕಂಠದೊಳ್ ಬರೆವ ರೇವನ ಕಂಠಕೆ "

ಇತ್ಯಾದಿ ವಾಕ್ಯಗಳು ಉಲ್ಲಿಖಿತವಾಗಿರುವವು. ಈ ಕಂದಪದ್ಯಗಳಲ್ಲಿ ರೇವಣಾರ್ಯನೆಂಬವನು ಕಂಠದಿಂದ (ಲೋಹಲೇಖನಿಯಿಂದ) ಅಕ್ಷರ ಗಳನ್ನು ಅತ್ಯಂತ ಸುಂದರವಾಗಿ ಬರೆಯುತ್ತಿದ್ದನೆಂದು ಅವನ ಪ್ರಶಂಸೆಯು ವಿಶೇಷವಾಗಿ ಮಾಡಲ್ಪಟ್ಟಿರುವದು.

ಇದಲ್ಲದೆ ಇದೇ ಶಾಸನಪುಸ್ತಕದ ೧೩೧ ನೆಯ ಪುಟದಲ್ಲಿ ಬಳ್ಳಾರಿ ಡಿ|| ಆಲೂರು ತಾ|| ರಾಮದುರ್ಗ ಗ್ರಾಮದ ಭೋಗೇಶ್ವರ ದೇವಾಲಯ ದಲ್ಲಿರುವ ಒಂದು ಶಾಸನವು ಮುದ್ರಿಸಲ್ಪಟ್ಟಿರುವದು. ಈ ಶಾಸನದಲ್ಲಿ

ಚಾಲುಕ್ಯ ವಿಕ್ರಮಶಕ ೪ (ಕ್ರಿ. ಶ. ೧೦೭೯) ಸಿದ್ಧಾರ್ಥಿ ಸಂವತ್ಸರ ಪುಷ್ಯಮಾಸ ಅಮಾವಾಸ್ಯೆ ಬೃಹಸ್ಪತಿವಾರ ಉತ್ತರಾಯಣ ಪುಣ್ಯಕಾಲ ಸಂಕ್ರಾಂತಿ ದಿವಸ ಸೋಮೇಶ್ವರದೇವರಿಗೆ ದಾನಮಾಡಿದ ವಿಷಯವು ಉಕ್ತವಾಗಿರುವದು. ಇದರಲ್ಲಿ—

" ಶ್ರೀಮನ್ಮಹಾಮಂಡಳೇಶ್ವರ ಜೋಗಿಮ್ಮೆಯರಸಗ್ಗೆ ದಂಡನಾಯಕ ರೇವರಸನು ಕರಣದ ಬಾವಿರಾಜನು ರಾಜಾಧ್ಯಕ್ಷ ಎರಮಯ್ಯನಾಯಕನು ಮಿಳ್ದು ಮೂವರ ಬಿನ್ನಪದಿಂ "

ಇತ್ಯಾದಿ ವಾಕ್ಯಗಳು ಕೆತ್ತಲ್ಪಟ್ಟಿರುವವು. ಇದರಲ್ಲುಕ್ತನಾಗಿರುವ ರೇವರಸನೆಂಬವನು ಶ್ರೀರೇವಣಸಿದ್ಧರ ಹೆಸರನ್ನಿಟ್ಟುಕೊಂಡವನಾಗಿ ದ್ದಾನೆ. ಈ ಮಹಾತ್ಮರ ಹೆಸರನ್ನು ಈ ಕಾಲದಲ್ಲಿಯೂ ಸಹ " ರೇವಯ್ಯ, ರೇವಣ್ಣ, ರೇವಪ್ಪ " ಇತ್ಯಾದಿಯಾಗಿ ಇಟ್ಟುಕೊಳ್ಳುವದು ರೂಢಿಯಲ್ಲಿರು ವದು. ಕ್ರಿ. ಶ. ೮ ನೆಯ ಶತಮಾನದಲ್ಲಿದ್ದ ರೇವಣನಾಥರಾಜನ ವಿಷಯವೂ ಕ್ರಿ. ಶ. ೧೧ ನೆಯ ಶತಮಾನದಲ್ಲಿದ್ದ ರೇವಣಾರ್ಯ ಮತ್ತು ರೇವರಸರ ವಿಷಯವೂ ಶಿಲಾಶಾಸನಗಳಿಂದ ಸ್ಪಷ್ಟವಾಗಿ ತಿಳಿದು ಬರುವದರಿಂದ, ಪೂರ್ವಕಾಲದಲ್ಲಿ ಅನೇಕ ಜನರು ಈ ಮಹಾತ್ಮರ ಹೆಸರ ನ್ನಿಟ್ಟುಕೊಳ್ಳುತ್ತಿದ್ದರೆಂದೂ, ಆ ಕಾಲದಲ್ಲಿ ಈ ಮಹಾತ್ಮರ ಪವಿತ್ರನಾಮವು ಜಗತ್ಪೂಜ್ಯವಾಗಿ ಮೆರೆಯುತ್ತಿತ್ತೆಂದೂ ಸ್ಪಷ್ಟವಾಗಿ ತೋರಿಬರುತ್ತದೆ.

ಕ್ರಿ. ಶ. ೧೦೩೦ ರಲ್ಲಿದ್ದ ಶ್ರೀಪತಿಪಂಡಿತಾರಾಧ್ಯರು ತಮ್ಮಿಂದ ಬರೆಯಲ್ಪಟ್ಟಿರುವ ಶ್ರೀಕರಭಾಷ್ಯದ ಪ್ರಾರಂಭದಲ್ಲಿ—

ಶ್ರೀಮಚ್ಛಿವಾಚಾರವಿಚಾರದೀಕ್ಷಂ
ಸ್ವಶಿಷ್ಯಸತ್ಪ್ರೀಣನಪೂರ್ಣಪಕ್ಷಂ
ದುರ್ವಾರಕಾಮಾದಿವಿದಾರದಕ್ಷಂ
ಭಜಾಮ್ಯಹಂ ರೇವಣಕಲ್ಪವೃಕ್ಷಂ ॥

ಎಂದು ಈ ಮಹಾತ್ಮರನ್ನು ಅಸಾಧಾರಣಪೂಜ್ಯಬುದ್ಧಿಯಿಂದ ಕೊಂಡಾಡಿರುವರಲ್ಲದೆ, ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ಅನೇಕ ಕಡೆಗೆ ಇವರ ಪವಿತ್ರನಾಮವನ್ನು ಉಲ್ಲೇಖಿಸಿರುವರು.

ಪೂರ್ವಕಾಲದಲ್ಲಿ "ಈಶಾನಶಿವಗುರು" ಎಂಬವರು ಸಂಸ್ಕೃತ ಭಾಷೆಯಲ್ಲಿ ಈ ಮಹಾತ್ಮರ ಚರಿತ್ರವನ್ನು ಬರೆದಿರುವ ವಿಷಯವು, ಬೊಮ್ಮರಸನು ಬರೆದಿರುವ ರೇವಣಸಿದ್ಧೇಶ್ವರ ಪುರಾಣದಿಂದ ತಿಳಿದುಬರುತ್ತದೆ. ಈಶಾನಶಿವಗುರುಗಳು ಕ್ರಿ. ಶ. ೯೫೦ ರಲ್ಲಿದ್ದರೆಂಬ ವಿಷಯವು ಕಡಪಾ ಡಿ॥ ಸಿದ್ಧವಟಂ ತಾ॥ ದೊಂಗಲಸಾನಿ ಗ್ರಾಮದ ಶಿವಾಲಯದಲ್ಲಿರುವ ಶಿಲಾಶಾಸನದಿಂದ ತಿಳಿದುಬರುವದು. ಈ ಶಾಸನದ ವಿಷಯವು, ಮದ್ರಾಸ್ ಓರಿಯಂಟಲ್ ಲೈಬ್ರರಿಯಲ್ಲಿರುವ ಕರ್ನಲ್ ಕೆ. ಮೆಕೆಂಜಿಯವರ ರಿಪೋರ್ಟಿನ (ತಾ॥ 15-4-1926) ೧೫೯ ನೆಯ ಪೇಜಿನಲ್ಲಿ ಬರೆಯಲ್ಪಟ್ಟಿರುವುದು.

ಈವರೆಗೆ ವಿವರಿಸಿರುವ ಪ್ರಾಚೀನಗ್ರಂಥಾಧಾರಗಳನ್ನೂ ಶಿಲಾಶಾಸನಗಳನ್ನೂ ವಿಮರ್ಶಿಸಿದರೆ, ಶ್ರೀರೇಣುಕಾಚಾರ್ಯರು ಪ್ರತಿಯೊಂದು ಯುಗದಲ್ಲಿಯೂ ಅವತರಿಸಿ, ಅನೇಕಾನೇಕಾದ್ಭುತಲೀಲೆಗಳನ್ನು ಆಚರಿಸಿ, ಜಗನ್ಮಾನ್ಯರಾಗಿ ಹೋಗಿರುವರೆಂಬುದು ಸ್ಪಷ್ಟವಾಗುತ್ತದೆ. ಇದರಿಂದ ಶ್ರೀರೇಣುಕಾಚಾರ್ಯರ ಕಾಲವು ಎಷ್ಟು ಪುರಾತನವಾಗಿರಬಹುದೆಂಬುದನ್ನು ಸಾರಾಸಾರವಿಚಾರಶೀಲರಾದ ವಾಚಕರೇ ಯೋಚಿಸಬೇಕು.

॥ ಶಿವಂ ಭೂಯಾತ್ ॥

॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ಶ್ರೀಜಗದ್ಗುರುರೇಣುಕಾಚಾರ್ಯರ ಲಿಂಗಾವತಾರ



ಶ್ರೀಪರಮೇಶ್ವರನು ಕೈಲಾಸದಲ್ಲಿ ಬ್ರಹ್ಮ-ವಿಷ್ಣು ಮೊದಲಾದ ಸಮಸ್ತದೇವತೆಗಳಿಂದಲೂ, ವೀರ-ನಂದಿ-ಭೃಂಗಿ-ವೃಷಭ-ಸ್ಕಂದ-ರೇಣುಕ-ದಾರುಕ-ಘಂಟಾಕರ್ಣ-ಧೇನುಕರ್ಣ-ವಿಶ್ವಕರ್ಣ ಮೊದಲಾದ ಪ್ರಮಥರಿಂದಲೂ ಪರಿಶೋಭಿತವಾದ ಸಭೆಯಲ್ಲಿ ದಿವ್ಯಪೀಠವನ್ನಲಂಕರಿಸಿ ಪರಮಾನಂದದಿಂದ ಸಮಸ್ತಲೋಕಗಳ ವಿಷಯವನ್ನು ವಿಚಾರಿಸುತ್ತಿರುವ ಸಮಯದಲ್ಲಿ, ಪ್ರಮಥಪುಂಗವನಾದ ಶ್ರೀರೇಣುಕಗಣಾಧೀಶ್ವರನನ್ನು ಕರೆದು— "ಎಲೈ ರೇಣುಕಗಣಾಧೀಶನೇ! ನೀನು ಭೂಲೋಕದಲ್ಲಿ ವೇದಮಾರ್ಗಾನುಸಾರವಾಗಿ ಶಿವಭಕ್ತಿಯನ್ನು ಪ್ರತಿಷ್ಠಿಸುವುದಕ್ಕೋಸ್ಕರ, ಕುಲ್ಯಪಾಕಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಶ್ರೀಸೋಮನಾಥಲಿಂಗದಿಂದ ತೇಜೋಮಯಶರೀರಧಾರಿಯಾಗಿ ಅವತರಿಸಿ, ಸಕಲಮಾನವರಿಗೂ ಶಿವಾದ್ವೈತಸಿದ್ಧಾಂತವನ್ನು ಉಪದೇಶಿಸಿ, ಸಮಸ್ತಭೂಮಂಡಲವನ್ನು ಶಿವಭಕ್ತಿಮಯವನ್ನಾಗಿ ಮಾಡಿ ಪುನಃ ನನ್ನ ಸನ್ನಿಧಿಗೆ ಬಾ." ಎಂದು ಅಪ್ಪಣೆಮಾಡಿದನು. ಪರಮೇಶ್ವರನ ಅಪ್ಪಣೆಯಂತೆ ಶ್ರೀರೇಣುಕಗಣಾಧೀಶ್ವರನು ಶಿವಾದ್ವೈತಸಿದ್ಧಾಂತವನ್ನು ಸ್ಥಾಪಿಸುವುದಕ್ಕೋಸ್ಕರ ಭೂಲೋಕದಲ್ಲಿ ಅವತರಿಸಿದನು. ಈ ವಿಷಯವು ಸಿದ್ಧಾಂತಶಿಖಾಮಣಿಯಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

ಅಥ ತ್ರಿಲಿಂಗವಿಷಯೇ ಕುಲ್ಯಪಾಕಾಭಿಧೇ ಸ್ಥಲೇ ।
ಸೋಮೇಶ್ವರಮಹಾಲಿಂಗಾತ್ ಪ್ರಾದುರಾಸೀತ್ಸ ರೇಣುಕಃ ॥೧॥

ಪ್ರಾದುರ್ಭೂತಂ ತಮಾಲೋಕ್ಯ ಶಿವಲಿಂಗಾತ್ತ್ರಿಲಿಂಗಜಾಃ |
ವಿಸ್ಮಿತಾಃ ಪ್ರಾಣಿನಃ ಸರ್ವೇ ಬಭೂವುರತಿತೇಜಸಂ ||೨||

ಭಸ್ಮೋದ್ಧೂಲಿತಸರ್ವಾಂಗಂ ಸಾರರುದ್ರಾಕ್ಷಭೂಷಣಂ |
ಜಟಾಮುಕುಟಸಂಯುಕ್ತಂ ತ್ರಿಪುಂಡ್ರಾಂಕಿತಮಸ್ತಕಂ ||೩||

ಕಟೀತಟೀಪಟೀಭೂತಕಂಥಾಪಟಲಬಂಧುರಂ |
ದಧಾನಂ ಯೋಗದಂಡಂ ಚ ಭಸ್ಮಾಧಾರಂ ಕಮಂಡಲುಂ ||೪||

ಶಿವಾದ್ವೈತಪರಿಜ್ಞಾನಪರಮಾನಂದಮೋದಿತಂ |
ನಿರ್ಧೂತಸರ್ವಸಂಸಾರವಾಸನಾದೋಷಪಂಜರಂ ||೫||

ಶಿವಾಗಮಸುಧಾಸಿಂಧುಸಮುನ್ಮೇಷಸುಧಾಕರಂ |
ಚಿತ್ತಾರವಿಂದಸಂಗೂಢಶಿವಪಾದಾಂಬುಜದ್ವಯಂ ||೬||

ಯಮಾದಿಯೋಗತಂತ್ರಜ್ಞಂ ಸ್ವತಂತ್ರಂ ಸರ್ವಕರ್ಮಸು |
ಸಮಸ್ತಸಿದ್ಧಸಂತಾನಸಮುದಾಯಶಿಖಾಮಣಿಂ ||೭||

ವೀರಸಿದ್ಧಾಂತನಿರ್ವಾಹಕೃತಪಟ್ಟನಿಬಂಧನಂ |
ಆಲೋಕಮಾತ್ರನಿರ್ಭಿನ್ನಸಮಸ್ತಪ್ರಾಣಿಪಾತಕಂ ||೮||

ತಮಪೃಚ್ಛನ್ ಜನಾಃ ಸರ್ವೇ ನಮಂತಃ ಕೋ ಭವಾನಿತಿ |
ಇತಿ ಪೃಷ್ಟೋ ಮಹಾಯೋಗೀ ಜನೈರ್ವಿಸ್ಮಿತಮಾನಸೈಃ ||೯||

ಪ್ರತ್ಯುವಾಚ ಶಿವಾದ್ವೈತಮಹಾನಂದಪರಾಯಣಃ |
ಪಿನಾಕಿನಃ ಪಾರ್ಶ್ವವರ್ತೀ ರೇಣುಕಾಖ್ಯೋ ಗಣೇಶ್ವರಃ ||೧೦||

ಶಿವಾದೇಶಾನುಸಾರೇಣ ಶಿವಲಿಂಗಾದಿಹಾಭವಂ |
ನಾಮ್ನಾ ರೇಣುಕಸಿದ್ಧೋಽಹಂ ಸಿದ್ಧಸಂತಾನನಾಯಕಃ |
ಸ್ವಚ್ಛಂದಚಾರೀ ಲೋಕೇಽಸ್ಮಿನ್ ಶಿವಸಿದ್ಧಾಂತಪಾಲಕಃ ||೧೧||

ಇತ್ಯುಕ್ತ್ವಾ ಪಶ್ಯತಾಂ ತೇಷಾಂ ವಿಷಯಸ್ಥಿರಚಕ್ಷುಷಾಂ |
ಉತ್ಥಾಯ ವ್ಯೋಮಮಾರ್ಗೇಣ ಮಲಯಾದ್ರಿಮುಪಾಗಮತ್ ||೧೨||

(ಸಿದ್ಧಾಂತಶಿಖಾಮಣಿ, ಪರಿ. ೪)



ಶ್ರೀಕುಲ್ಯಪಾಕಕ್ಷೇತ್ರವಿರಾಜಮಾನ ಶ್ರೀಸೋಮನಾಥಲಿಂಗದಿಂದ
ಶ್ರೀಜಗದ್ಗುರು ರೇಣುಕಾಚಾರ್ಯರ ಅವತಾರ.

ಪರಮೇಶ್ವರನ ಅಪ್ಪಣೆಯಮೇರೆಗೆ ಶ್ರೀ ರೇಣುಕಗಣಾಧೀಶ್ವರನು ತ್ರಿಲಿಂಗ (ತೆಲಗು) ದೇಶದಲ್ಲಿ ಸುಪ್ರಸಿದ್ಧಶಿವಕ್ಷೇತ್ರವಾದ ಶ್ರೀಕುಲ್ಯಪಾಕ ಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಶ್ರೀಸೋಮೇಶ್ವರನಾಮಕಮಹಾಲಿಂಗದಿಂದ ಅವತರಿಸಿದನು. ತ್ರಿಲಿಂಗದೇಶದ ಜನರೆಲ್ಲರೂ, ಶಿವಲಿಂಗದಿಂದ ಅವತರಿಸಿದ ಮಹಾತೇಜಃಶಾಲಿಯಾದ ಶ್ರೀರೇಣುಕಗಣಾಧೀಶ್ವರನನ್ನು ನೋಡಿ, ಆಶ್ಚರ್ಯ ದಿಂದ ಕೂಡಿದವರಾದರು. ಭಸ್ಮಲಿಪ್ತವಾದ ಶರೀರವುಳ್ಳವನೂ, ರುದ್ರಾಕ್ಷಾ ಲಂಕೃತನೂ, ಜಟಾಮುಕುಟಮಂಡಿತನೂ, ತ್ರಿಪುಂಡ್ರಾಂಕಿತಮಸ್ತಕನೂ, ನಡುವಿನಲ್ಲಿ ವಸ್ತ್ರದಂತಿದ್ದ ಕಂಥೆಯಿಂದ ಮನೋಹರನಾದವನೂ, ಯೋಗ ದಂಡ-ಕಮಂಡಲು-ಭಸ್ಮಘುಂಟಿಕೆಗಳನ್ನು ಧರಿಸಿದವನೂ, ಶಿವಾದ್ವೈತ ಸಿದ್ಧಾಂತಜ್ಞಾನದಿಂದುಂಟಾದ ಪರಮಾನಂದದಲ್ಲಿ ಲೀನನಾದವನೂ, ಸಮಸ್ತಸಂಸಾರವಾಸನಾದೋಷಗಳ ಸಮೂಹದಿಂದ ದೂರನಾದವನೂ, ಶಿವಾಗಮರೂಪವಾದ ಅಮೃತಸಮುದ್ರದ ಅಭಿವೃದ್ಧಿಗೆ ಚಂದ್ರಸ್ವರೂ ಪನೂ, ತನ್ನ ಹೃದಯಕಮಲದಲ್ಲಿ ಪರಶಿವನ ಪಾದಕಮಲಗಳನ್ನು ಸದಾ ಸಂಬಂಧಿಸಿಕೊಂಡಿರುವವನೂ, ಯಮನಿಯಮಾದ್ಯಷ್ಟಾಂಗಯೋಗಸ್ವರೂ ಪವನ್ನು ತಿಳಿದವನೂ, ಸಮಸ್ತಸಿದ್ಧಕುಲ ಸಮುದಾಯಕ್ಕೆ ಶಿಖಾರತ್ನಸ್ವರೂ ಪನೂ, ವೀರಶೈವಸಿದ್ಧಾಂತವನ್ನು ನೆಲೆಗೊಳಿಸುವುದರಲ್ಲಿ ಪಟ್ಟವನ್ನು ಕಟ್ಟಿ ಕೊಂಡವನೂ, ದರ್ಶನಮಾತ್ರದಿಂದ ಸಮಸ್ತಪ್ರಾಣಿಗಳ ಪಾಪವನ್ನು ನಾಶಮಾಡತಕ್ಕವನೂ ಆದ ಶ್ರೀರೇಣುಕಾಚಾರ್ಯನನ್ನು ಕುರಿತು—ಆ ದೇವಾಲಯದಲ್ಲಿದ್ದ ಸಮಸ್ತಜನರು ಆಶ್ಚರ್ಯದಿಂದೊಡಗೂಡಿ ನಮಸ್ಕರಿ ಸುವಂಥವರಾಗಿ, ಎಲೈ ಮಹನೀಯನೇ! ನೀನು ಯಾರು? ಎಂದು ಪ್ರಶ್ನೆ ಮಾಡಿದರು. ಶಿವಾದ್ವೈತಮಹಾನಂದದಲ್ಲಿ ಲೀನನಾದವನೂ, ಪರಮೇ ಶ್ವರನ ಪಾರ್ಶ್ವವರ್ತಿಯೂ ಆದ ಶ್ರೀರೇಣುಕಗಣೇಶ್ವರನು ಆ ಜನರನ್ನು ಕುರಿತು, ಈ ರೀತಿಯಾಗಿ ನುಡಿದನು. ಎಲೈ, ಜನಗಳಿರಾ! ನಾನು ಶ್ರೀಪರಮೇಶ್ವರನ ಅಪ್ಪಣೆಯ ಮೇರೆಗೆ ಪರಮಪವಿತ್ರವಾದೀ ಶಿವಕ್ಷೇತ್ರದಲ್ಲಿ

ವಿರಾಜಿಸುತ್ತಿರುವ ಈ ಶಿವಲಿಂಗದಿಂದ ಅವತರಿಸಿದೆನು. ನನ್ನ ಹೆಸರು "ರೇಣುಕಸಿದ್ಧ" ಎಂದಿರುವುದು. ನಾನು ಸಿದ್ಧರ ಸಮುದಾಯಕ್ಕೆಲ್ಲ ಅಧಿಪತಿಯಾಗಿದ್ದೇನೆ. ನಾನು ಈ ಲೋಕದಲ್ಲಿ ಸ್ವತಂತ್ರನಾಗಿದ್ದೇನೆ; ಮತ್ತು ಶಿವಾದ್ವೈತಸಿದ್ಧಾಂತವನ್ನು ರಕ್ಷಿಸುವವನಾಗಿದ್ದೇನೆ. ಎಂದು ನುಡಿದು, ಆ ಜನರು ಅನಿಮಿಷದೃಷ್ಟಿಯಿಂದ ನೋಡುತ್ತಿರಲು, ಗಗನ ಮಾರ್ಗದಿಂದ ಮಲಯಪರ್ವತವನ್ನು ಕುರಿತು ಪ್ರಯಾಣಮಾಡಿದನು.

ಶ್ರೀರೇಣುಕಾಚಾರ್ಯರು ಕುಲ್ಯಪಾಕಕ್ಷೇತ್ರದಿಂದ ಮಲಯಪರ್ವತ ದಲ್ಲಿ ರಾರಾಜಿಸುತ್ತಿದ್ದ ಅಗಸ್ತ್ಯಾಶ್ರಮಕ್ಕೆ ದಯಮಾಡಿಸಿದ ಕೂಡಲೆ, ಅಗಸ್ತ್ಯಮಹರ್ಷಿಗಳು ಅಸಾಧಾರಣಭಕ್ತಿವಿಶೇಷದಿಂದ ಆ ಪ್ರಮಥ ಪುಂಗವರನ್ನು ಎದುರ್ಗೊಂಡು, ದರ್ಭಾಸನದಲ್ಲಿ ಕುಳ್ಳಿರಿಸಿ, ಷೋಡಶೋಪ ಚಾರಗಳಿಂದ ಪೂಜಿಸಿ—

ಸ್ಥಿರಮದ್ಯ ಶಿವಜ್ಞಾನಂ ಸ್ಥಿರಾ ಮೇ ತಾಪಸಕ್ರಿಯಾ ।
ಭವದ್ದರ್ಶನಪುಣ್ಯೇನ ಸ್ಥಿರಾ ಮೇ ಮುನಿರಾಜತಾ ॥೪೬॥

ಸಂಸಾರಸರ್ಪದಷ್ಟಾನಾಂ ಮೂರ್ಛಿತಾನಾಂ ಶರೀರಿಣಾಂ ।
ಕಟಾಕ್ಷಸ್ತವ ಕಲ್ಯಾಣಂ ಸಮುಜ್ಜೀವನಭೇಷಜಂ ॥೪೭॥

ಸಮಸ್ತಲೋಕಸಂದಾಪತಾಪತ್ರಯಮಹಾನಲಃ ।
ತ್ವತ್ಪದಾಂಬುಕಣಾಸ್ವಾದಾದುಪಶಾಮ್ಯತಿ ದೇಹಿನಾಂ ॥೪೮॥

ರೇಣುಕಂ ತ್ವಾಂ ವಿಜಾನಾಮಿ ಗಣನಾಥಂ ಶಿವಪ್ರಿಯಂ ।
ಅವತೀರ್ಣಮಿಮಾಂ ಭೂಮಿಂ ಮದನುಗ್ರಹಕಾಂಕ್ಷಯಾ ॥೪೯॥

ಭವಾದೃಶಾನಾಂ ಸಿದ್ಧಾನಾಂ ಪ್ರಬೋಧಧ್ವಸ್ತಜನ್ಮನಾಂ ।
ಪ್ರವೃತ್ತಿರೀದೃಶೀ ಲೋಕೇ ಪರಾನುಗ್ರಹಕಾರಿಣೀ ॥೫೦॥

ತ್ವನ್ಮುಖಾಚ್ಛ್ರೋತುಮಿಚ್ಛಾಮಿ ಸಿದ್ಧಾಂತಂ ಶ್ರುತಿಸಮ್ಮತಂ ।
ಸರ್ವಜ್ಞ ವದ ಮೇ ಸಾಕ್ಷಾಚ್ಛೈವಂ ಸರ್ವಾರ್ಥಸಾಧಕಂ॥೫೧॥

ಸದ್ಯಃ ಸಿದ್ಧಿಕರಂ ಪುಂಸಾಂ ಸರ್ವಯೋಗೀಂದ್ರಸೇವಿತಂ ।
ದುರಾಚಾರ್ಯೈರನಾಘ್ರಾತಂ ಸ್ವೀಕೃತಂ ವೇದವೇದಿಭಿಃ ॥
ಶಿವಾತ್ಮೈಕ್ಯಮಹಾಬೋಧಸಂಪ್ರದಾಯಪ್ರವರ್ತಕಂ ॥೫೨॥

(ಸಿ. ಶಿ. ಪರಿ. ೪)

ಎಲೈ ಮಹಾತ್ಮನೇ, ನಿನ್ನ ದರ್ಶನದಿಂದೊದಗಿದ ಪುಣ್ಯವಿಶೇಷದಿಂದ ಇಂದಿಗೆ ನನ್ನ ಶಿವಜ್ಞಾನವು ಸ್ಥಿರವಾಯಿತು. ಇಂದಿಗೆ ನನ್ನ ತಪಃಕ್ರಿಯೆಯು ಸ್ಥಿರವಾಯಿತು. ಇಂದಿಗೆ ನನ್ನ ಮುನಿಸಾರ್ವಭೌಮತ್ವವು ಸ್ಥಿರವಾಯಿತು. ಸಂಸಾರರೂಪವಾದ ಸರ್ಪದಿಂದ ಕಡಿಸಿಕೊಂಡು ಮೂರ್ಛಿತರಾಗಿರುವ ಮಾನವರಿಗೆ ನಿನ್ನ ಕಲ್ಯಾಣಕಟಾಕ್ಷವೇ ಸಂಜೀವನೌಷಧವಾಗಿದೆ. ಸಮಸ್ತ ಲೋಕಗಳನ್ನು ಸುಡತಕ್ಕ ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕತಾಪರೂಪ ವಾದ ಪ್ರಚಂಡಾಗ್ನಿಯು ನಿನ್ನ ಪಾದೋದಕದ ಒಂದು ಬಿಂದು ಮಾತ್ರ ಸೇವನೆಯಿಂದಲೇ ಶಾಂತವಾಗುತ್ತದೆ. ಶಿವಪ್ರೀತಿಪಾತ್ರನೂ ಪ್ರಮಥಾಧಿ ಪತಿಯೂ ಆದ ಎಲೈ ರೇಣುಕಗಣಾಧೀಶ್ವರನೇ, ನನ್ನನ್ನು ಅನುಗ್ರಹಿಸ ಬೇಕೆಂಬ ಅಭಿಲಾಷೆಯಿಂದ ನೀನು ಈ ಭೂಮಂಡಲದಲ್ಲಿ ಅವತರಿಸಿ ರುವೆ; ಎಂಬುದನ್ನು ಬಲ್ಲೆನು. ಶಿವಜ್ಞಾನದಿಂದ ಜನನ ಮರಣಗಳನ್ನು ನಾಶಮಾಡಿದ ನಿನ್ನಂಥ ಸಿದ್ಧಾಗ್ರೇಸರರ ಈ ರೀತಿಯಾದ ಸಂಚಾರವೇ ಮಾನವಪ್ರಾಣಿಗಳಿಗೆ ಅನುಗ್ರಹವನ್ನುಂಟುಮಾಡತಕ್ಕುದಾಗಿರುತ್ತದೆ. ಎಲೈ, ರೇಣುಕಾಚಾರ್ಯನೇ! ವೇದಸಮ್ಮತವಾದ ಸಿದ್ಧಾಂತಶಾಸ್ತ್ರವನ್ನು ನಿನ್ನ ಮುಖದಿಂದ ಕೇಳಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ; ಆದುದ ರಿಂದ ಸರ್ವಜ್ಞಮೂರ್ತಿಯೇ, ಸರ್ವಾರ್ಥಸಾಧಕವಾದುದೂ, ಶಿವಸಂಬಂ ಧವಾದುದೂ, ತತ್‍ಕ್ಷಣದಲ್ಲಿ ಸಿದ್ಧಿಯನ್ನುಂಟುಮಾಡತಕ್ಕುದೂ, ಸಮಸ್ತ ಯೋಗೀಂದ್ರರಿಂದ ಸೇವಿತವಾದುದೂ, ದುರಾಚಾರಿಗಳಿಂದ ಅನಾಘ್ರಾತ ವಾದುದೂ, ವೇದಜ್ಞರಿಂದ ಸ್ವೀಕೃತವಾದುದೂ, ಶಿವಜೀವೈಕ್ಯಮಹಾ ಜ್ಞಾನಸಂಪ್ರವರ್ತಕವಾದುದೂ ಆದ ಸಿದ್ಧಾಂತಶಾಸ್ತ್ರವನ್ನು ನನಗೆ ಉಪ ದೇಶಮಾಡು.

ಈ ರೀತಿಯಾಗಿ ಅಗಸ್ತ್ಯರು ಶ್ರೀರೇಣುಕಾಚಾರ್ಯರ ಮಹಿಮೆಯನ್ನು ನಾನಾವಿಧವಾಗಿ ಕೊಂಡಾಡಿ, ಶ್ರುತಿಸಮ್ಮತವಾದ ಶಿವಾದ್ವೈತ ಸಿದ್ಧಾಂತವನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಲು, ಆಗ್ಗೆ ಶ್ರೀರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗಳಿಗೆ ಶಿವಾದ್ವೈತಸಿದ್ಧಾಂತವನ್ನು ವಿಶದವಾಗಿ ಉಪದೇಶಿಸಿದರು. ಶ್ರೀರೇಣುಕಾಚಾರ್ಯರ ಉಪದೇಶರೂಪವಾದೀ ಗ್ರಂಥವು "ಸಿದ್ಧಾಂತಶಿಖಾಮಣಿ" ಅಥವಾ "ರೇಣುಕಾಗಸ್ತ್ಯಸಂವಾದ" ಎಂಬ ಹೆಸರಿನಿಂದ ಲೋಕವಿಖ್ಯಾತವಾಗಿರುವುದು. ಈ ಮಹಾಗ್ರಂಥವನ್ನು ಈಗ್ಗೆ ೨೦೦೦ ವರ್ಷಗಳ ಪೂರ್ವದಲ್ಲಿದ್ದ ಶ್ರೀಶಿವಯೋಗಿ ಶಿವಾಚಾರ್ಯರೆಂಬ ಮಹನೀಯರು ರಚಿಸಿರುವರು. ಈ ಗ್ರಂಥದ ಕೊನೆಯ ಭಾಗದಲ್ಲಿ ಶ್ರೀರೇಣುಕಾಚಾರ್ಯರು ವಿಭೀಷಣನ ಪ್ರಾರ್ಥನಾನುಸಾರವಾಗಿ ಏಕಕಾಲದಲ್ಲಿಯೇ ೩ ಕೋಟಿ ಜನ ಗುರುರೂಪವನ್ನು ಧರಿಸಿ, ೩ ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಿಸಿದ ವಿಷಯವು ಬರೆಯಲ್ಪಟ್ಟಿರುವುದು. ಶ್ರೀರೇಣುಕಾಚಾರ್ಯರು ಕೃತ-ತ್ರೇತಾಯುಗಗಳಲ್ಲಿ ಶಿವಲಿಂಗಮುಖದಿಂದ ಅವತರಿಸಿ ಲೋಕಪ್ರಸಿದ್ಧ ವ್ಯಕ್ತಿಗಳನ್ನು ಉದ್ಧರಿಸಿದ ವಿಷಯವು ಈ ಮಹಾಗ್ರಂಥದಲ್ಲಿ ಉಲ್ಲಿಖಿತವಾಗಿರುವುದು. ಇದರಂತೆಯೇ ಈ ಮಹಾಚಾರ್ಯರು ದ್ವಾಪರ-ಕಲಿಯುಗಗಳಲ್ಲಿ ಅವತರಿಸಿ, ಅನೇಕಾನೇಕಾದ್ಭುತಲೀಲೆಗಳನ್ನು ಆಚರಿಸಿ ಹೋಗಿರುವರು. ಈ ವಿಷಯಗಳೆಲ್ಲವೂ ಆ ಮಹಾತ್ಮರ ವಿಷಯಕವಾಗಿರುವ ಸಮಸ್ತಗ್ರಂಥಗಳಲ್ಲಿಯೂ ಉಲ್ಲೇಖಿಸಲ್ಪಟ್ಟಿರುವವು. ಶ್ರೀಜಗದ್ಗುರು ರೇಣುಕಾಚಾರ್ಯರ ಶಿವಲಿಂಗಾವತಾರವಿಷಯವನ್ನು ಸಕಲ ಶಿವಾಗಮಗಳೂ, ಪ್ರಾಚೀನವೀರಶೈವಮತಗ್ರಂಥಗಳೂ ಮುಕ್ತಕಂಠದಿಂದ ಸಾರುತ್ತಿದ್ದರೂ, ಅಪ್ರಬುದ್ಧರಾದ ಕೆಲಜನ ವಿರಕ್ತರು ಮತ್ತು ಬಸವಪಂಥಿಗಳು ಈ ವಿಷಯವನ್ನು ಮರೆಮಾಚಿ, ಶ್ರೀರೇಣುಕಾಚಾರ್ಯರು ಲಿಂಗಾವತಾರಿಗಳಲ್ಲವೆಂದೂ, ಅವರು ೧೨ ನೆಯ ಶತಮಾನದಲ್ಲಿದ್ದವರೆಂದೂ ಮನಸ್ಸಿಗೆ ಬಂದಂತೆ ಅಪಲಪಿಸುತ್ತ, ಸಮಾಜದಲ್ಲಿ ಗೊಂದಲವನ್ನೆಬ್ಬಿಸುತ್ತಿರುವರು.

ಪೂರ್ವಾಪರವಿಚಾರಮಾಡದೆ ಕೇವಲ ಅಸೂಯಾಬುದ್ಧಿಯಿಂದ ಈ ರೀತಿ ವಕ್ರಮಾರ್ಗವನ್ನು ಹಿಡಿದು ನಡೆಯುತ್ತಿರುವುದು ಅವರಿಗೆ ಎಷ್ಟೂ ಭೂಷಣವಾದುದಲ್ಲ.

ವಿರಕ್ತವರ್ಗಕ್ಕೆಲ್ಲಾ ಪರಮಪೂಜ್ಯರೂ, ಮಹಾತಪಸ್ವಿಗಳೂ, ಜಗದ್ವಿಖ್ಯಾತರೂ ಆಗಿಹೋಗಿರುವ ಅನಾದಿತೋಂಟದ ಸಿದ್ಧಲಿಂಗೇಶ್ವರರು ತಮ್ಮಿಂದ ವಿರಚಿತವಾಗಿರುವ ಸಿದ್ಧೇಶ್ವರವಚನದಲ್ಲಿ—

> "ಆದಿಯಲ್ಲಿ ಶಿವತತ್ತ್ವದಲ್ಲಿ ರೇಣುಕನುದಯವಾಗಿದ್ದರೆ ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯೆಂತು? ಆ ಶಿವಲಿಂಗದಲ್ಲಿಯೇ ಹುಟ್ಟಿ ಶಿವಲಿಂಗದಲ್ಲಿಯೇ ಲಯವಾದ ರೇವಣಸಿದ್ಧೇಶ್ವರನು ಅನಾದಿಮುಕ್ತನಲ್ಲ ಆದಿಮುಕ್ತನೆಂದು ಆಡುವ ಅಜ್ಞಾನಿಗಳಿಗೆ ನಾಯಕನರಕ ತಪ್ಪದು."

ಎಂದು ಉಲ್ಲೇಖಿಸಿದ್ದಾರೆ. ಈ ಮಹಾನುಭಾವರ ವಚನದಲ್ಲಿ ಶ್ರೀರೇಣುಕಾಚಾರ್ಯರ ಲಿಂಗಾವತಾರ ವಿಷಯವೂ, ಆ ಮಹಾತ್ಮರ ಅನಾದಿತ್ವವೂ, ಪೂಜ್ಯತ್ವವೂ ಎಷ್ಟು ಭಕ್ತಿಯಿಂದ ವರ್ಣಿತವಾಗಿರುವುದೆಂಬುದನ್ನು ವಿರಕ್ತರು ಮತ್ತು ಬಸವಪಂಥಿಗಳು ಶಾಂತಮನಸ್ಸಿನಿಂದ ವಿಚಾರಮಾಡಿಕೊಳ್ಳಬೇಕು. ವಿರಕ್ತರ ಮೂಲಪುರುಷರೇ ಈ ರೀತಿಯಾಗಿ ಅಸಾಧಾರಣವಾದ ಪೂಜ್ಯಬುದ್ಧಿಯಿಂದ ಶ್ರೀರೇಣುಕಭಗವತ್ಪಾದರನ್ನು ಕೊಂಡಾಡಿರುವಾಗ, ಅವರ ಅನುಯಾಯಿಗಳು ಅದಕ್ಕೆ ವಿರುದ್ಧವಾಗಿ ವರ್ತಿಸುವುದು ಅಧರ್ಮವಲ್ಲವೇ? ಆದುದರಿಂದ ವಿರಕ್ತರು ಮೇಲುದಾಹರಿಸಿರುವ ಶ್ರೀಸಿದ್ಧಲಿಂಗೇಶ್ವರರ ವಚನವನ್ನು ಪಂಚಾಕ್ಷರಮಹಾಮಂತ್ರದಂತೆ ಸದಾ ಜಪಿಸುತ್ತ, ಶ್ರೀರೇಣುಕಾದಿಪಂಚಾಚಾರ್ಯರಲ್ಲಿ ಶ್ರೀತೋಂಟದಸಿದ್ಧೇಶ್ವರರಂತೆ ನಿರ್ಮಲವಾದ ಭಕ್ತಿಯನ್ನಿಟ್ಟು ಮುಕ್ತಿಭಾಗಿಗಳಾಗಬೇಕು.

ಶ್ರೀರೇಣುಕಾದಿಪಂಚಾಚಾರ್ಯರು ಕಲ್ಲಿನಿಂದ ಎಂದಾದರೂ ಅವತರಿಸುವುದುಂಟೇ? ಇದು ಶುದ್ಧ ಸುಳ್ಳೆಂದು ಬಸವಪಂಥಿಗಳು ನಾಸ್ತಿಕವಾದವನ್ನು ಮಾಡುತ್ತಿರುವರು. ಹೀಗೆ ವಾದಿಸುವದು ಅಜ್ಞಾನಪ್ರಭಾವವಲ್ಲದೆ ಬೇರೆಯಲ್ಲ. ಏಕೆಂದರೆ—ಯೋಗಸಿದ್ಧರು ಶಿಲೆಯಲ್ಲೇಕೆ? ವಜ್ರಾದಿಗಳಲ್ಲಿಯೂ ಸಹ ಪ್ರವೇಶಿಸಬಹುದೆಂದು ಯೋಗಶಾಸ್ತ್ರವು ಘಂಟಾಘೋಷವಾಗಿ ಸಾರುತ್ತಿರುವದು. ಯೋಗಶಾಸ್ತ್ರಪ್ರವರ್ತಕನಾದ ಪತಂಜಲಿಮಹರ್ಷಿಯು—

"ತತೋಽಣಿಮಾದಿವತ್ ಪ್ರಾದುರ್ಭಾವಃ ಕಾಯಸಂಪತ್ತದ್ಧರ್ಮಾನಭಿಘಾತಶ್ಚ"

ಇತ್ಯಾದಿ ಸೂತ್ರಗಳಿಂದ ಯೋಗಿಯಲ್ಲಿ ಅಣಿಮಾದ್ಯಷ್ಟಸಿದ್ಧಿಗಳ ಮಹಿಮೆಯನ್ನು ಹೇಳಿರುವನು. ಈ ಸೂತ್ರಗಳಿಗೆ ವೃತ್ತಿಯನ್ನು ಬರೆದ ಭೋಜದೇವನು ತನ್ನ ವೃತ್ತಿಯಲ್ಲಿ—

"ಪರಮಾಣುತ್ವಂ ಪ್ರಾಪ್ತೋ ವಜ್ರಾದೀನಾಮಪ್ಯಂತಃ ಪ್ರವಿಶತಿ"

ಅಂದರೆ ಪರಮಾಣುತ್ವಸಿದ್ಧಿಯನ್ನು ಪಡೆದ ಯೋಗಿಯು ವಜ್ರಾದಿಗಳಲ್ಲಿಯೂ ಸಹ ಪ್ರವೇಶಮಾಡುವನು. ಎಂದು ಬರೆದಿದ್ದಾನೆ. ಅಂದಮೇಲೆ ಶಿವಯೋಗಿಶಿಖಾಮಣಿಗಳೆನಿಸಿಕೊಂಡು ಅಘಟನಘಟನಸಾಮರ್ಥ್ಯಶಾಲಿಗಳಾಗಿದ್ದ ಶ್ರೀಜಗದ್ಗುರುರೇಣುಕಾದಿಪಂಚಾಚಾರ್ಯರು ಯೋಗಮಹಿಮೆಯ ದ್ವಾರಾ ಶಿವಲಿಂಗಮುಖದಿಂದ ಅವತರಿಸುವದರಲ್ಲೇನಾಶ್ಚರ್ಯವು? ಸಾಕ್ಷಾತ್ ಪರಮೇಶ್ವರನ ಚಿತ್ಕಲಾಸ್ವರೂಪರಾಗಿದ್ದು ತೇಜೋಮಯಶರೀರಧಾರಿಗಳಾಗಿರುವ ಆ ಪ್ರಮಥಪುಂಗವರನ್ನು ಈಗಿನ ಮಾನವರಂತೆ ಭಾವಿಸುವುದು ಬಹುಜನ್ಮಕೃತಪಾಪಪ್ರಭಾವವಲ್ಲದೆ ಬೇರೆಯಲ್ಲ. ಅಸ್ತು! ಬಸವಪಂಥಿಗಳು ಅಸೂಯಾಭರದಲ್ಲಿ ಜ್ಯೋತಿರ್ಲಿಂಗಮೂರ್ತಿಗಳಿಗೆ ಶಿಲೆಯೆಂದು ನುಡಿಯುವದು ಶುದ್ಧ ನಾಸ್ತಿಕತನ! ಶಿವಲಿಂಗಕ್ಕೆ ಕಲ್ಲೆಂದು

ನುಡಿಯುವ ಮಹಾಶಯರು ತಮ್ಮ ಎದೆಯ ಮೇಲೆ ಧರಿಸಿಕೊಂಡಿರು ವದನ್ನು ಸಹ ಕಲ್ಲೆಂದೇ ಭಾವಿಸಬೇಕಾಗುವದಲ್ಲವೇ? ಅವರು ಹೀಗೆ ಭಾವಿಸುವರೋ? ಪೂರ್ವಾಪರ ವಿಚಾರಮಾಡದೆ ಪ್ರಾಣಪ್ರತಿಷ್ಠಾಯುಕ್ತ ವಾದ ಶಿವಲಿಂಗಮೂರ್ತಿಗಳಿಗೆ ಕಲ್ಲೆಂದು ನುಡಿಯುವದು ಮಹಾ ಪಾಪವು! ಶ್ರೀಪರಮೇಶ್ವರನು ಮಾರ್ಕಂಡೇಯನನ್ನು ಉದ್ಧರಿಸುವದ ಕ್ಕೋಸ್ಕರ ಶಿವಲಿಂಗ ಮುಖದಿಂದ ಅವತರಿಸಲಿಲ್ಲವೇ? ವಿಷ್ಣುವು ಪ್ರಹ್ಲಾದನನ್ನುದ್ಧರಿಸುವದಕ್ಕೋಸ್ಕರ ಸ್ತಂಭದಿಂದ ಅವತರಿಸಲಿಲ್ಲವೇ? ಜಗದ್ವಿಖ್ಯಾತನಾಗಿರುವ ಅಗಸ್ತ್ಯಮಹರ್ಷಿಯು ಕುಂಭದಿಂದ ಅವತರಿಸ ಲಿಲ್ಲವೇ? ಸೀತಾದೇವಿಯು ಭೂಗರ್ಭದಿಂದ ಅವತರಿಸಲಿಲ್ಲವೇ? ಲೋಕ ಪ್ರಸಿದ್ಧವಾದ ಈ ವಿಷಯುಗಳೆಲ್ಲವನ್ನೂ ಸುಳ್ಳು ಎನ್ನಲಿಕ್ಕೆ ಬರುತ್ತದೆಯೇ? ಪ್ರಾಚೀನಗ್ರಂಥಕಾರರು ಈಗಿನವರಂತೆ ದುರಭಿಮಾನಿಗಳಾಗಿದ್ದಿಲ್ಲ; ಪಕ್ಷಪಾತಿಗಳಾಗಿದ್ದಿಲ್ಲ; ನಾಸ್ತಿಕರಾಗಿದ್ದಿಲ್ಲ; ಅವರು ಇದ್ದಕ್ಕಿದ್ದಹಾಗೆ ಯಥಾರ್ಥ ವಿಷಯುಗಳನ್ನು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಎಲ್ಲ ಮಹರ್ಷಿಗಳಿಗೂ ತಂದೆತಾಯಿಗಳ ಹೆಸರನ್ನು ಬರೆದ ಗ್ರಂಥಕಾರರು ಅಗಸ್ತ್ಯರಿಗೇಕೆ ಬರೆಯಲಿಲ್ಲ? ವಿಷ್ಣುವಿನ ಅವತಾರಿಯೆಂದು ಪ್ರಸಿದ್ಧ ನಾಗಿರುವ ಶ್ರೀರಾಮಚಂದ್ರನಿಗೆ ತಂದೆತಾಯಿಗಳ ಹೆಸರನ್ನು ಬರೆದು, ಸೀತಾದೇವಿಗೇಕೆ ಬರೆಯಲಿಲ್ಲ? ಅವರಿಗೆ ನಿಜವಾಗಿಯೂ ತಂದೆತಾಯಿಗ ಳಿದ್ದರೆ, ಅದನ್ನು ಮರೆಮಾಚುವದರಿಂದ ಗ್ರಂಥಕಾರರಿಗೆ ಬರುವ ಪ್ರಯೋಜನವೇನಿತ್ತು? ಅವರು ಅಗಸ್ತ್ಯ-ಸೀತಾದೇವಿಯುವರಿಂದ ಲಂಚ ವನ್ನೇನಾದರೂ ತೆಗೆದುಕೊಂಡಿದ್ದರೇ? ಜಗದ್ವಿಖ್ಯಾತನಾಗಿರುವ ವ್ಯಾಸ ಮತ್ತು ಪಾಂಡವರ ಉತ್ಪತ್ತಿಯು ಅತ್ಯಂತ ಹೇಯುವಾಗಿದ್ದರೂ, ಅದನ್ನು ಇದ್ದಕ್ಕಿದ್ದಹಾಗೆಯೇ ಬರೆದಿರುವರಲ್ಲವೇ? ಇದರಿಂದ ಪ್ರಾಚೀನಗ್ರಂಥ ಕಾರರು ಎಲ್ಲ ವಿಷಯುಗಳನ್ನೂ ಇದ್ದಕ್ಕಿದ್ದಂತೆಯೇ ಬರೆದಿರುವರೆಂದು ಸ್ಪಷ್ಟವಾಗುವದಿಲ್ಲವೇ? ಆದುದರಿಂದ ಆ ಮಹಾತ್ಮರು ಬರೆದಿರುವ ವಾಕ್ಯ

ಗಳೇ ನಮಗೆ ಆಪ್ತವಾಕ್ಯಗಳು. ಆಸ್ತಿಕರಿಗೆ ಆಪ್ತವಾಕ್ಯವೇ ಮುಖ್ಯ ಪ್ರಮಾಣವು. ಮಕ್ಕಳ ಉತ್ಪತ್ತಿಯ ವಿಷಯದಲ್ಲಿ ತಾಯಿಯ ವಾಕ್ಯವು ಹೇಗೆ ಆಪ್ತವಾಕ್ಯವೆನಿಸುವುದೋ, ಹಾಗೆಯೇ ಪೂರ್ವಾಚಾರ್ಯರ ಅವತಾರವಿಷಯದಲ್ಲಿಯೂ ಪ್ರಾಚೀನಗ್ರಂಥಕಾರರ ವಾಕ್ಯಗಳು ಆಪ್ತವಾಕ್ಯಗಳೆಂದು ಭಾವಿಸಬೇಕು. ಆಪ್ತವಾಕ್ಯವನ್ನು ಸರ್ವರೂ ನಂಬಲೇಬೇಕು. ಇಲ್ಲದಿದ್ದರೆ ಪ್ರಪಂಚವೇ ತಲೆಕೆಳಗಾಗುವ ಪ್ರಸಂಗವು ಬರುವದು. ಆದುದರಿಂದ ಪ್ರಾಚೀನಗ್ರಂಥಗಳಲ್ಲಿ ಮುಖ್ಯವಾಗಿ ವಿಶ್ವಾಸವನ್ನಿಡಬೇಕು. ಆ ಮಹಾತ್ಮರು ಹೇಳಿದ ವಾಕ್ಯಗಳು ಸತ್ಯವೆಂದು ಭಾವಿಸಬೇಕು. ಅಂದರೆ ಸರ್ವವೂ ಸಮಂಜಸವಾಗುವದು. ನಾಸ್ತಿಕ ಪಂಥಿಗಳು ಈ ವಿಷಯಗಳನ್ನೆಲ್ಲಾ ನಿರ್ಮಲಮನಸ್ಸಿನಿಂದ ಆಲೋಚಿಸಿ, ಅಘಟನಘಟನಸಾಮರ್ಥ್ಯಶಾಲಿಗಳಾದ ಶ್ರೀಜಗದ್ಗುರುರೇಣುಕಾದಿಪೂರ್ವಾಚಾರ್ಯರಲ್ಲಿ ಅಸಿತರಸಾಧಾರಣವಾದ ಪೂಜ್ಯಭಾವನೆಯನ್ನಿಟ್ಟು ಧನ್ಯರಾಗಬೇಕು.

॥ ಶಿವಂ ಭೂಯಾತ್ ॥



॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ಪ್ರಾಚೀನ ಗ್ರಂಥಗಳಲ್ಲಿ ಪಂಚಾಚಾರ್ಯರ ಪವಿತ್ರನಾಮಗಳು



ವೀರಶೈವಮತಸ್ಥಾಪಕರಾದ ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರು ಚತುರ್ಯುಗಗಳಲ್ಲಿ ಶಿವಲಿಂಗಮುಖದಿಂದ ದಿವ್ಯದೇಹಧಾರಿಗಳಾಗಿ ಅವತರಿಸಿ ಭೂಮಂಡಲದಲ್ಲಿ ವೀರಶೈವಮತವನ್ನು ಸ್ಥಾಪಿಸಿದರೆಂದು ಶಿವಾಗಮಗಳು ಮುಕ್ತಕಂಠದಿಂದ ಸಾರುತ್ತಿರುವವಷ್ಟೆ! ಹೀಗಿದ್ದರೂ ಕೆಲಜನರು ಈ ವಿಷಯವನ್ನು ಕಣ್ತೆರೆದು ನೋಡದೆ, ಪ್ರಾಚೀನಗ್ರಂಥಗಳಲ್ಲಿ ಆಚಾರ್ಯರ ಹೆಸರುಗಳೇ ಬರುವುದಿಲ್ಲವೆಂದು ವ್ಯರ್ಥವಾಗಿ ಪ್ರಲಪಿಸುತ್ತಿರುವರು. ಇದು ಅವರ ಅಜ್ಞಾನದ ಪ್ರಭಾವವಲ್ಲದೆ ಬೇರೆಯಲ್ಲ. ಅವರು ಪ್ರಾಚೀನಗ್ರಂಥಗಳನ್ನು ಶ್ರಮಪಟ್ಟು ನೋಡಿದ್ದರೆ ಹೀಗೆಂದಿಗೂ ನುಡಿಯುತ್ತಿದ್ದಿಲ್ಲ. ಈ ವಿಧವಾದ ಜನರು ನಾವು ಈ ಕೆಳಗೆ ಉದಾಹರಿಸಿರುವ ಗ್ರಂಥಾಧಾರಗಳನ್ನು ನೋಡಿ ಭ್ರಮೆಯಿಂದ ದೂರಾಗುವರೆಂದು ನಂಬಿದ್ದೇವೆ.

ಭಾರತೀಯರ ಪವಿತ್ರಧರ್ಮಗಳನ್ನೂ, ಅವರ ಪವಿತ್ರಚರಿತ್ರಗಳನ್ನೂ ಬರೆದು ಇಂದಿನವರೆಗೆ ಸಮಸ್ತಮತೀಯರಿಗೂ ಮಾನ್ಯರಾಗಿರುವ ಮಹಾತ್ಮರೆಂದರೆ ವ್ಯಾಸಮಹರ್ಷಿಗಳು. ಈ ಮಹರ್ಷಿಗಳು ದ್ವಾಪರಯುಗದಲ್ಲಿದ್ದು ಹದಿನೆಂಟುಪುರಾಣಗಳನ್ನೂ ಮಹಾಭಾರತವನ್ನೂ ರಚಿಸಿ ಭಾರತೀಯರಿಗೆ ಮಹೋಪಕಾರವನ್ನು ಮಾಡಿದ್ದಾರೆ. ಪ್ರತಿಯೊಂದು ಮತದವರಿಗೂ ಈ ಮಹರ್ಷಿಗಳ ವಾಕ್ಯಗಳೇ ಪ್ರಮಾಣಗಳು. ಈ ಮಹರ್ಷಿಗಳು ರಚಿಸಿರುವ ಪುರಾಣಗಳಲ್ಲಿಯೂ, ಮಹಾಭಾರತದಲ್ಲಿಯೂ ಅನೇಕ ಕಡೆಗೆ ವೀರಶೈವ ಮತಾಚಾರ್ಯರ ಪವಿತ್ರನಾಮಗಳು ಕಂಗೊಳಿಸುತ್ತಿರುವವು. ವ್ಯಾಸಮಹರ್ಷಿಗಳು ಮೊದಲು ಪರಮವಿಷ್ಣುಭಕ್ತರಾಗಿ ಸರ್ವತ್ರ ವಿಷ್ಣುವಿನ ಆಧಿಕ್ಯ

ವನ್ನೇ ಸಾರುತ್ತಿದ್ದರು. ಹೀಗಿರುವಲ್ಲಿ ಒಂದಾನೊಂದು ದಿವಸ ಅವರು ಕಾಶೀಕ್ಷೇತ್ರದಲ್ಲಿರುವ ವಿಶ್ವನಾಥನ ದೇವಾಲಯಕ್ಕೆ ಹೋಗಿ, ಅಲ್ಲಿಯೂ ಕೂಡ "ನ ದೇವಃ ಕೇಶವಾತ್ಪರಃ" ಎಂದು ವಿಷ್ಣುವಿನ ಆಧಿಕ್ಯವನ್ನು ಸಾರಲು, ಕೂಡಲೆ ನಂದೀಶ್ವರನಿಂದ ಹಸ್ತಸ್ತಂಭನವನ್ನು ಹೊಂದಿ ಮಹಾ ದುಃಖಕ್ಕೀಡಾದರು. ಆಮೇಲೆ ಪಶ್ಚಾತ್ತಾಪಪಟ್ಟು ಶ್ರೀವಿಶ್ವನಾಥನನ್ನು ನಾನಾರೀತಿಯಿಂದ ಸ್ತುತಿಸಲು ಬಾಹುಬಂಧನದಿಂದ ಮುಕ್ತರಾದರು. ಈ ವಿಷಯವು ಅವರಿಂದಲೇ ಬರೆಯಲ್ಪಟ್ಟಿರುವ ಕಾಶೀಖಂಡದ ೯೫ನೆಯ ಅಧ್ಯಾಯದಲ್ಲಿ ವಿಶೇಷವಾಗಿ ವರ್ಣಿಸಲ್ಪಟ್ಟಿರುವುದು.

ಪಾರಾಶರ್ಯಸ್ತದಾರಭ್ಯ ಶಂಭುಭಕ್ತಿಪರೋಽಭವತ್ ।
ಲಿಂಗಂ ವ್ಯಾಸೇಶ್ವರಂ ಸ್ಥಾಪ್ಯ ಘಂಟಾಕರ್ಣಹ್ರದಾಗ್ರತಃ ॥೬೮॥
ವಿಭೂತಿಭೂಷಣೋ ನಿತ್ಯಂ ನಿತ್ಯಂ ರುದ್ರಾಕ್ಷಭೂಷಣಃ ।
ರುದ್ರಸೂಕ್ತಪರೋ ನಿತ್ಯಂ ನಿತ್ಯಂ ಲಿಂಗಾರ್ಚಕೋಽಭವತ್ ॥೬೯॥

ವ್ಯಾಸಮಹರ್ಷಿಗಳು ಬಾಹುಬಂಧನದಿಂದ ಮುಕ್ತರಾದಮೇಲೆ "ಘಂಟಾಕರ್ಣತೀರ್ಥ"ದ ಮುಂಭಾಗದಲ್ಲಿ "ವ್ಯಾಸೇಶ್ವರ" ಎಂಬ ಹೆಸರಿನಿಂದ ಒಂದು ಶಿವಲಿಂಗವನ್ನು ಸ್ಥಾಪಿಸಿ, ವಿಭೂತಿ-ರುದ್ರಾಕ್ಷ ಮೊದಲಾದ ಶಿವಚಿಹ್ನಗಳಿಂದ ಅಲಂಕೃತರಾಗಿ, ನಿತ್ಯವೂ ಶ್ರೀರುದ್ರದಿಂದ ಶಿವಲಿಂಗಪೂಜೆಯನ್ನು ಮಾಡಹತ್ತಿದರೆಂದು ಮೇಲಿನ ಶ್ಲೋಕಗಳ ಅಭಿಪ್ರಾಯವಾಗಿರುತ್ತದೆ.

ಶಿವಲಿಂಗವನ್ನು ಸ್ಥಾಪಿಸಿದಮೇಲೆ ವ್ಯಾಸಮಹರ್ಷಿಗಳು ವೀರಶೈವ ಮತಾಚಾರ್ಯರಾದ ಶ್ರೀಘಂಟಾಕರ್ಣಶಿವಾಚಾರ್ಯರಿಂದ ಬ್ರಹ್ಮಜ್ಞಾನವನ್ನು ಪಡೆದುಕೊಂಡರೆಂದು ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ. ಇದು ಸತ್ಯವೆಂದೇ ಹೇಳಬೇಕಾಗಿದೆ. ಏಕೆಂದರೆ—ವ್ಯಾಸಕಾಶಿಯಲ್ಲಿರುವ ವ್ಯಾಸೇಶ್ವರಲಿಂಗಮೂರ್ತಿಯ ಸಮ್ಮುಖದಲ್ಲಿ ಅನಾದಿಕಾಲ

ದಿಂದ ಇಂದಿನವರೆಗೂ ಜಟಾ, ಭಸ್ಮ, ರುದ್ರಾಕ್ಷ, ಲಿಂಗಧಾರಣಾದಿ ವೀರಶೈವಾಚಾರ್ಯ ಚಿಹ್ನಗಳಿಂದ ಕೂಡಿರುವ "**ಘಂಟಾಕರ್ಣಶಿವಾಚಾರ್ಯರ**" ಶಿಲಾವಿಗ್ರಹವು ಅಚ್ಚಳಿಯದಂತೆ ಶೋಭಿಸುತ್ತಿರುವದು. ಆ ದೇಶದ ಜನರು ಆ ಮೂರ್ತಿಗೆ ವೃದ್ಧಪರಂಪರೆಯಿಂದ "**ವ್ಯಾಸಜೀಕಾ ಗುರು**" ಎಂದು ಕರೆಯುತ್ತಿರುವರು. ವ್ಯಾಸೇಶ್ವರನ ಮುಂಭಾಗದಲ್ಲಿ ಮೇಲಿನ ಶ್ಲೋಕಗಳಲ್ಲಿ ಹೇಳಿರುವಂತೆ ಘಂಟಾಕರ್ಣಶಿವಾಚಾರ್ಯರ ಪವಿತ್ರಾಭಿಧಾನದಿಂದ "**ಘಂಟಾಕರ್ಣತೀರ್ಥ**" ಎಂಬ ಕೊಳವು ಶೋಭಿಸುತ್ತಿರುವದು. ಈ ತೀರ್ಥಕ್ಕೆ ಅಲ್ಲಿಯ ಜನರು "**ಘಂಟಾಕರ್ಣ ತಲಾವ**" ಎಂದು ಕರೆಯುತ್ತಿರುವರು. ಈ ತೀರ್ಥದ ಮಹಿಮೆಯು ಕಾಶೀಖಂಡದ ಉತ್ತರಭಾಗದಲ್ಲಿ ವಿಶೇಷವಾಗಿ ವರ್ಣಿತವಾಗಿರುವದು. ಮಹಾಪುಣ್ಯಪ್ರದವಾದ ಈ ತೀರ್ಥವು ವೀರಶೈವಮತಾಚಾರ್ಯರ ಪವಿತ್ರ ನಾಮದಿಂದ ವಿರಾಜಿಸುತ್ತಿರುವುದನ್ನು ನೋಡಿದರೆ, ಈ ಮಹಾಚಾರ್ಯರ ಪ್ರಭಾವವು ಎಷ್ಟುಮಟ್ಟಿಗೆ ಇರಬಹುದೆಂಬುದನ್ನು ಬೇರೆ ವರ್ಣಿಸ ಬೇಕಾಗಿಲ್ಲ.

ಘಂಟಾಕರ್ಣಶಿವಾಚಾರ್ಯರು ದ್ವಾಪರಯುಗದಲ್ಲಿ ಶ್ರೀಹಿಮವತ್ಕೇದಾರಕ್ಷೇತ್ರದಲ್ಲಿ ವೀರಶೈವಧರ್ಮಪೀಠವನ್ನು ಸ್ಥಾಪಿಸಿದರು. ಈ ಮಹಾಚಾರ್ಯರ ಆಶ್ರಮದಲ್ಲಿ ಜ್ಞಾನಸಂಪಾದನೆಗಾಗಿ ಅನೇಕಜನ ಮಹರ್ಷಿಗಳು ವಾಸವಾಗಿದ್ದರೆಂಬ ವಿಷಯವು ಸ್ಕಂದಪುರಾಣಾಂತರ್ಗತವಾದ ಕೇದಾರ ಖಂಡದಲ್ಲಿ—

**ಘಂಟಾಕರ್ಣಮುನಿಸ್ತತ್ರ ಸದ್ಯಃ ಪ್ರತ್ಯಯಕಾರಕಃ ।**
**ನಾನಾಮುನಿಜನಾಕೀರ್ಣೇ ಹ್ಯಾಶ್ರಮೇ ಮುನಿಪೂಜಿತೇ ॥**

ಇತ್ಯಾದಿ ಶ್ಲೋಕಗಳಿಂದ ಪ್ರತಿಪಾದಿಸಲ್ಪಟ್ಟಿರುವುದು.

ವ್ಯಾಸಮಹರ್ಷಿಗಳು ದ್ವಾಪರಯುಗದಲ್ಲಿದ್ದುದರಿಂದ, ದ್ವಾಪರ ಯುಗದಲ್ಲಿ ರೇಣುಕ-ದಾರುಕ-ಘಂಟಾಕರ್ಣ-ಧೇನುಕರ್ಣ-ವಿಶ್ವಕರ್ಣರೆಂಬ

ಹೆಸರುಗಳಿಂದ ಅವತರಿಸಿದ್ದ ಶ್ರೀಮತ್ಪಂಚಾಚಾರ್ಯರ ಪ್ರವಿತ್ರನಾಮ ಗಳನ್ನು ಅವರು ತಮ್ಮ ಪುರಾಣಗಳಲ್ಲಿ ಉಲ್ಲೇಖಿಸಿರುವರು. ಅಸ್ತು! ಕಾಶೀಖಂಡದಲ್ಲಿ ಘಂಟಾಕರ್ಣತೀರ್ಥದ ವಿಷಯವು ವರ್ಣಿಸಲ್ಪಟ್ಟಿರು ವಂತೆಯೇ, ಇನ್ನುಳಿದ ಆಚಾರ್ಯರ ಹೆಸರಿನ ಪವಿತ್ರತೀರ್ಥಗಳು ಸಹ ವ್ಯಾಸೋಕ್ತಪುರಾಣಗಳಲ್ಲಿ ವರ್ಣಿತವಾಗಿರುವವು.

ಕಾಶೀಖಂಡದ ೭೦ನೆಯ ಅಧ್ಯಾಯದಲ್ಲಿ—

ದಾರುಕೇಶ್ವರತೀರ್ಥೇ ತು ದಾರುಕೇಶಸಮೀಪತಃ ।
ಪಾತಾಲತಾಲುವದನಾಮಾಕಾಶೋಚ್ಛ್ರೀಂ ಧರಾಧರಾಂ ॥೮೦॥

ಕಪಾಲಕರ್ತ್ರೀಹಸ್ತಾಂ ಚ ಬ್ರಹ್ಮಾಂಡಕವಲಪ್ರಿಯಾಂ ।
ಶುಷ್ಕೋದರೀಂ ಸ್ನಾಯುಬದ್ಧಾಂ ಚರ್ಮಮುಂಡೇತಿ ವಿಶ್ರುತಾಂ ॥೮೧॥

ಕಾಶೀಕ್ಷೇತ್ರದಲ್ಲಿರುವ "ದಾರುಕೇಶ್ವರತೀರ್ಥ"ದಲ್ಲಿ ಸ್ನಾನ ವನ್ನು ಮಾಡಿ ದಾರುಕೇಶ್ವರ ದೇವಾಲಯದ ಸಮೀಪದಲ್ಲಿರುವ ಚರ್ಮ ಮುಂಡಾದೇವಿಯ ದರ್ಶನವನ್ನು ಮಾಡಿಕೊಳ್ಳುವುದು ಮಹಾಪುಣ್ಯಪ್ರದ ವೆಂದು ಮೇಲಿನ ಶ್ಲೋಕಗಳ ಅಭಿಪ್ರಾಯವಾಗಿರುತ್ತದೆ. ಶ್ರೀಜಗದ್ಗುರು ದಾರುಕಾಚಾರ್ಯರ ಹೆಸರಿನ ಪವಿತ್ರತೀರ್ಥವೂ, ದೇವಾಲಯವೂ ಕಾಶೀ ಕ್ಷೇತ್ರದಲ್ಲಿ ವಿರಾಜಿಸುತ್ತಿರುವವು.

ಇದೇ ರೀತಿಯಾಗಿ ಮಹಾಭಾರತದಲ್ಲಿಯೂ ಸಹ "ರೇಣುಕೆ ತೀರ್ಥ"ದ ವಿಷಯವು ಉಕ್ತವಾಗಿರುವುದು.

ಮಹಾಭಾರತ ವನಪರ್ವದ ೮೨ ನೆಯ ಅಧ್ಯಾಯದಲ್ಲಿ—

ರೇಣುಕಸ್ಯ ಚ ತತ್ರೈವ ತೀರ್ಥಂ ಸಿದ್ಧನಿಷೇವಿತಂ ।
ತತ್ರ ಸ್ನಾತ್ವಾ ಭವೇದ್ವಿಪ್ರೋ ನಿರ್ಮಲಶ್ಚಂದ್ರಮಾ ಯಥಾ ॥೮೨॥

ಸಿದ್ಧಪುರುಷರಿಂದ ಸೇವಿತವಾದ "ರೇಣುಕತೀರ್ಥ" ದಲ್ಲಿ ಬ್ರಾಹ್ಮಣನು ಸ್ನಾನಮಾಡಿದರೆ, ಚಂದ್ರನಂತೆ ನಿರ್ಮಲನಾಗುವನೆಂದು ಆ ತೀರ್ಥದ ಮಹಿಮೆಯು ವರ್ಣಿಸಲಟ್ಟಿರುವುದು.

ಕ್ರಿ. ಶ. ೧೦೫೦ ರಲ್ಲಿ ಭರತಭೂಮಿಯನ್ನಲಂಕರಿಸಿದ್ದ ಕ್ಷೇಮೇಂದ್ರ ನೆಂಬ ಮಹಾಕವಿಯು "ಭಾರತಮಂಜರಿ" ಎಂಬ ಮಹಾಕಾವ್ಯವನ್ನು ರಚಿಸಿದ್ದಾನೆ. ಈ ಮಹಾಕವಿಯು ಮಹಾಭಾರತದ ವಿಷಯವನ್ನೇ ತನ್ನ ಗ್ರಂಥದಲ್ಲಿ ವಿವರಿಸಿರುತ್ತಾನೆ. ಈ ಮಹಾಕಾವ್ಯದ ವನಪರ್ವದಲ್ಲಿ ೬೦೫ ನೆಯ ಶ್ಲೋಕದಿಂದ ೬೬೭ ನೆಯ ಶ್ಲೋಕದವರೆಗೆ ತೀರ್ಥಯಾತ್ರೆ ಗಳ ವರ್ಣನೆಯಿದೆ. ಇದರಲ್ಲುಕ್ತವಾಗಿರುವ "ರುದ್ರತೀರ್ಥ, ಸ್ಕಂದಕೋಟಿ ತೀರ್ಥ, ರುದ್ರಕೋಟಿತೀರ್ಥ" ಇತ್ಯಾದಿ ಶೈವತೀರ್ಥಗಳ ಮಧ್ಯದಲ್ಲಿ— "ರೇಣುಕತೀರ್ಥ" ದ ನಾಮವನ್ನೂ ಉಲ್ಲೇಖಿಸಿರುತ್ತಾನೆ.

ಬ್ರಹ್ಮತುಂಗಂ ಚ ಕೌಮಾರಂ ರೇಣುಕಂ ಚ ಸರೋವರಂ॥೬೧೯॥

ಈ ರೇಣುಕತೀರ್ಥವು ಕೇದಾರಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಉಷಾಮಠಕ್ಕೆ (ಶ್ರೀಜಗದ್ಗುರು ಏಕೋರಾಮಾರಾಧ್ಯರ ಧರ್ಮಪೀಠಕ್ಕೆ) ೨ ಮೈಲು ದೂರದಲ್ಲಿರುವುದು. ಅಲ್ಲಿಯ ಜನರು ಈ ತೀರ್ಥಕ್ಕೆ "ರೇವಣ ತಲಾವ" ಎಂದು ಕರೆಯುತ್ತಿರುವರು.

ಮಹಾಭಾರತ ವನಪರ್ವದ ೮೨ ನೆಯ ಅಧ್ಯಾಯದಲ್ಲಿ—

ಶಂಕುಕರ್ಣೇಶ್ವರಂ ದೇವಮರ್ಚಯಿತ್ವಾ ಯುಧಿಷ್ಠಿರ ।
ಅಶ್ವಮೇಧಾದ್ದಶಗುಣಂ ಪ್ರವದಂತಿ ಮನೀಷಿಣಃ ॥೭೦॥

ಎಲೈ ಧರ್ಮರಾಜನೇ, ಶಂಕುಕರ್ಣೇಶ್ವರನನ್ನು ಪೂಜಿಸಿದ್ದಾದರೆ, ಅಶ್ವಮೇಧಯಾಗವನ್ನು ಮಾಡಿದ್ದಕ್ಕಿಂತಲೂ ಹತ್ತುಪಟ್ಟು ಫಲವು ಪ್ರಾಪ್ತ ವಾಗುವುದೆಂದು ಶಂಕುಕರ್ಣಾಚಾರ್ಯರ ಹೆಸರಿನ ಲಿಂಗಮೂರ್ತಿಯ ಮಹಿಮೆಯು ಉಕ್ತವಾಗಿರುವುದು.

ಮಹಾಭಾರತದಲ್ಲಿ ವೀರಶೈವಮತಾಚಾರ್ಯರ ಪವಿತ್ರನಾಮಗಳು ಉಕ್ತವಾಗಿರುವಂತೆ, ವೀರಶೈವಮತದ ಸನಾತನತ್ವವೂ ವೀರಶೈವಬ್ರಾಹ್ಮಣರ ಪೂಜ್ಯತ್ವವೂ ಉಕ್ತವಾಗಿರುವುವು.

ಅಸಂಖ್ಯಾತಾ ಭವಿಷ್ಯಂತಿ ಭಿಕ್ಷವೋ ಲಿಂಗಿನಸ್ತಥಾ ।
ಆಶ್ರಮಾಣಾಂ ವಿಕಲ್ಪಾಶ್ಚ ವೃತ್ತೇಽಸ್ಮಿನ್ ವೈ ಕೃತೇಯುಗೇ ॥

(ಶಾಂತಿಪರ್ವ ೬೪-೨೪)

ಮಹಾಭಾರತದ ಶಾಂತಿಪರ್ವದಲ್ಲುಕ್ತವಾಗಿರುವ ಭವಿಷ್ಯಕಥನ ಪ್ರಸಂಗದಲ್ಲಿ—ಕೃತಯುಗದಲ್ಲಿ ಅಸಂಖ್ಯಾಕಜನ ಭಿಕ್ಷುಗಳೂ, ಲಿಂಗಧಾರಿಗಳೂ ಆಗುವರೆಂದೂ, ಆಶ್ರಮವಿಕಲ್ಪಗಳೂ ಉಂಟಾಗುವುವೆಂದೂ ಹೇಳಲ್ಪಟ್ಟಿದೆ. ಇದರಿಂದ ಕೃತಯುಗದಲ್ಲಿ ಅಸಂಖ್ಯಜನ ವೀರಶೈವರು ಭರತಖಂಡದಲ್ಲಿ ವಾಸವಾಗಿದ್ದರೆಂದು ಸ್ಪಷ್ಟವಾಗುತ್ತದೆ.

ಕಾಶೀಕ್ಷೇತ್ರನಿವಾಸಿಗಳಾದ ಶ್ರೀಮಾನ್ ರಾಮದಾಸಗೌಡ ಎಂ.ಎ. ಮಹೋದಯರು ತಾವು ಬರೆದಿರುವ "ಹಿಂದುತ್ವ" ವೆಂಬ ಮಹಾಗ್ರಂಥದ ೬೮೮ನೆಯ ಪುಟದಲ್ಲಿ ಮೇಲ್ಕಂಡ ಶ್ಲೋಕವನ್ನುದಾಹರಿಸಿ, ಈ ಶ್ಲೋಕದ ಬಗ್ಗೆ ಈ ಕೆಳಗೆ ಕಂಡಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

"ಇಸಸೆ ಪತಾ ಚಲತಾ ಹೈ ಕಿ ಉಸ ಸಮಯ ಭೀ ವೀರಶೈವೋಂಕೀ
ಅಚ್ಛೀ ಸಂಖ್ಯಾ ರಹೀ ಹೋಗೀ, ಔರ ವಹ ಸಮಯ ಕೌನ ಥಾ ? ಕೃತಯುಗ ।
ಅರ್ಥಾತ್ ಸತ್‌ಯುಗಮೇ ಭೀ ಲಿಂಗಧಾರಣ ಕರನೇ ವಾಲೇ ಬಹುತ ಥೇ ।
ಇಸಸೆ ವೀರಶೈವೋಂಕಿ ಪ್ರಾಚೀನತಾ ಸಿದ್ಧ ಹೋತೀ ಹೈ ।"

ಕೃತಯುಗದಲ್ಲಿ ಲಿಂಗಧಾರಣಮಾಡಿದ ಜನರು ವಿಶೇಷವಾಗಿದ್ದರೆಂದೂ, ಇದರಿಂದ ವೀರಶೈವಮತದ ಪ್ರಾಚೀನತ್ವವು ಸಿದ್ಧವಾಗುವುದೆಂದೂ ಬರೆದಿದ್ದಾರೆ.

ಕಿಮಾಹುರ್ಭರತಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಾಃ ।
ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣಂ ವಾಽಪ್ಯಲಿಂಗಿನಂ ॥೧॥
ಸ್ವವೃತ್ತಿಮಭಿಪನ್ನಾಯ ಲಿಂಗಿನೇ ಚೇತರಾಯ ಚ ।
ದೇಯಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥೨॥

(ಅನುಶಾಸನ ಪರ್ವ. ಅ. ೨೨)

ಎಲೈ ಭೀಷ್ಮನೇ! ಲಿಂಗಿಬ್ರಾಹ್ಮಣ ಮತ್ತು ಅಲಿಂಗಿಬ್ರಾಹ್ಮಣ ಇವರಿಬ್ಬರಲ್ಲಿ ದಾನವನ್ನು ತೆಗೆದುಕೊಳ್ಳುವುದಕ್ಕೆ ಯಾರು ಯೋಗ್ಯರು? ಎಂದು ಧರ್ಮರಾಜನು ಪ್ರಶ್ನೆಮಾಡಲು, ಅದಕ್ಕೆ ಭೀಷ್ಮನು—ಎಲೈ ಧರ್ಮರಾಜನೇ! ತನ್ನ ಧರ್ಮದಲ್ಲಿ ನಿಷ್ಠೆಯುಳ್ಳ ಲಿಂಗಿಬ್ರಾಹ್ಮಣನಿಗಾಗಲಿ ಅಥವಾ ಅಲಿಂಗಿಬ್ರಾಹ್ಮಣನಿಗಾಗಲಿ ದಾನಮಾಡಬೇಕೆಂದೂ, ಇವರಿಬ್ಬರೂ ತಪಸ್ವಿಗಳೆಂದೂ ಉತ್ತರವನ್ನು ಕೊಟ್ಟಿದ್ದಾನೆ. ಈ ಶ್ಲೋಕಗಳಲ್ಲಿ ಲಿಂಗಧಾರಿ ಮಾಹೇಶ್ವರಬ್ರಾಹ್ಮಣರ ಪೂಜ್ಯತೆಯು ಸ್ಪಷ್ಟವಾಗಿ ಉಕ್ತವಾಗಿರುವುದು.

ಪೂನಾನಗರದಲ್ಲಿ ಸ್ಥಾಪಿತವಾಗಿರುವ "ಆನಂದಾಶ್ರಮಗ್ರಂಥಮಾಲೆ" ಯಲ್ಲಿ ಪ್ರಕಟವಾದ ಸೌರಪುರಾಣದ ೩೫ ನೆಯ ಅಧ್ಯಾಯದಲ್ಲಿ—

ಭೃಂಗೀ ಪುರತ್ರಯಂ ಹಂತುಂ ಲಕ್ಷಕೋಟಿಗಣೈರ್ಯುತಃ ॥೨೫॥
ಜಗಾಮ ಶಂಕುಕರ್ಣಶ್ಚ ಗೋಕರ್ಣಶ್ಚ ಮಹಾಬಲಃ ।
ಕುಂದದಂತೋ ಮಹಾಕಾಲೋ ಡಿಂಡೀ ಮುಂಡೀ ಗಣೇಶ್ವರಃ ॥
ಶತಜಿಹ್ವಃ ಸಹಸ್ರಾಕ್ಷೋ ವೀರಭದ್ರೋ ಮಹಾಬಲಃ ।
ಶಿವಾಖ್ಯೋ ವಿಶಿಖಶ್ಚೈವ ತಥಾ ಪಂಚಶಿಖೋ ಮಹಾನ್ ॥೨೭॥

ಭೃಂಗಿಯು ತ್ರಿಪುರಾಸುರನನ್ನು ಸಂಹಾರಮಾಡುವದಕ್ಕೋಸ್ಕರ ಶಂಕುಕರ್ಣ, ಗೋಕರ್ಣ, ಮಹಾಬಲ, ಕುಂದದಂತ, ಡಿಂಡಿ, ಮುಂಡಿ, ಶತಜಿಹ್ವ, ಸಹಸ್ರಾಕ್ಷ, ವೀರಭದ್ರ, ಶಿವ, ವಿಶಿಖ, ಪಂಚಶಿಖ ಮೊದಲಾದ ಅಸಂಖ್ಯ ಪ್ರಮಥರೊಡನೆ ಹೊರಟನೆಂದು ಈ ಶ್ಲೋಕಗಳ ಅಭಿಪ್ರಾಯ ವಾಗಿರುತ್ತದೆ. ಈ ಪ್ರಮಥಪುಂಗವರಲ್ಲಿ ಶಂಕುಕರ್ಣ ಮತ್ತು ಗೋಕರ್ಣ ಈ ಉಭಯರು ದ್ವಾಪರಯುಗದಲ್ಲಿ ವೀರಶೈವ ಮತಸ್ಥಾಪಕ ರಾದ ಶ್ರೀಮತ್ಪಂಚಾಚಾರ್ಯರಲ್ಲಿ ಪರಿಶೋಭಿಸುತ್ತಿರುವ ವಿಷಯವು ಶಿವಾಗಮಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುವುದು. ಶಂಕುಕರ್ಣ, ಗೋಕರ್ಣ ಎಂಬೀ ನಾಮಗಳು ಘಂಟಾಕರ್ಣ ಮತ್ತು ಧೇನುಕರ್ಣ ಶಿವಾಚಾರ್ಯರ ಪರ್ಯಾಯನಾಮಗಳಾಗಿರುವುವು.

ಈ ವಿಷಯವು ಪಾಶುಪತತಂತ್ರದಲ್ಲಿ—

ದ್ವಾಪರೇ ರೇಣುಕಶ್ಚೇತಿ ದಾರುಕಶ್ಚ ದ್ವಿತೀಯಕಃ ।
ತೃತೀಯಃ ಶಂಕುಕರ್ಣಶ್ಚ ಚತುರ್ಥೋ ಧೇನುಕರ್ಣಕಃ ॥
ಪಂಚಮೋ ವಿಶ್ವಕರ್ಣಾಖ್ಯಃ ಪಂಚ ನಾಮಾನಿ ವೈ ಶೃಣು ॥

ಇತ್ಯಾದಿ ಶ್ಲೋಕಗಳಿಂದ ಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಿರುವುದು.

ಭಾರತೀಯರಿಗೆ ಪರಮಪೂಜ್ಯವಾಗಿರುವ ವೇದಶಾಖೆಗಳಲ್ಲಿಯೂ ಸಹ ಈ ಪೂಜ್ಯಪಾದರ ಪವಿತ್ರನಾಮಗಳು ಕಂಗೊಳಿಸುತ್ತಿರುವವು.

ಯಜುಶ್ಶಾಖಾಂತರ್ಗತವೀರಲಿಂಗೋಪನಿಷತ್ತಿನಲ್ಲಿ—

ಸದ್ಯೋಜಾತಮುಖಮಾಸೀತ್ ರೇಣುಕಾಚಾರ್ಯ ಆರಾಧ್ಯ ಉದ್ಭವತಿ । ವಾಮದೇವಮುಖಮಾಸೀತ್ ದಾರುಕಾಚಾರ್ಯ ಆರಾಧ್ಯ ಉದ್ಭವತಿ । ಅಘೋರಮುಖಮಾಸೀತ್ ಘಂಟಾಕರ್ಣಗಣೇಶ ಆರಾಧ್ಯ ಉದ್ಭವತಿ । ತತ್ಪುರುಷಮುಖಮಾಸೀತ್ ಧೇನುಕರ್ಣಗಣೇಶ ಆರಾಧ್ಯ ಉದ್ಭವತಿ । ಈಶಾನಮುಖಮಾಸೀತ್ ವಿಶ್ವಕರ್ಣ ಗಣೇಶ ಆರಾಧ್ಯ ಉದ್ಭವತಿ । ವೇದಾಗಮಸಂಪ್ರದಾಯ ಮಹೇಶ್ವರತತ್ತ್ವವಿತ್ಪಂಚಾಚಾರ್ಯೇಭ್ಯೋದೀಕ್ಷಿತೋ ಲಿಂಗಸ್ಪರ್ಶನಃ ಸ ಏವಾಹಂ ॥

ಪರಮೇಶ್ವರನ ಸದ್ಯೋಜಾತಮುಖದಿಂದ ರೇಣುಕಾಚಾರ್ಯರು, ವಾಮದೇವಮುಖದಿಂದ ದಾರುಕಾಚಾರ್ಯರು, ಅಘೋರಮುಖದಿಂದ ಘಂಟಾಕರ್ಣರು, ತತ್ಪುರುಷಮುಖದಿಂದ ಧೇನುಕರ್ಣರು, ಈಶಾನಮುಖದಿಂದ ವಿಶ್ವಕರ್ಣರು ಅವತರಿಸಿದರೆಂದೂ, ವೇದಾಗಮಸಂಪ್ರದಾಯವನ್ನೂ ಶಿವತತ್ತ್ವವನ್ನೂ ಬಲ್ಲವರಾದ ಈ ಪಂಚಾಚಾರ್ಯರಿಂದ ಶಿವದೀಕ್ಷೆಯನ್ನು ತೆಗೆದುಕೊಂಡವನು ಸಾಕ್ಷಾತ್ ಶಿವನೇ ಆಗುವನೆಂದೂ ವೀರಲಿಂಗೋಪನಿಷತ್ತು ಬೋಧಿಸುತ್ತದೆ.

ಇದೇ ರೀತಿಯಾಗಿ ಜಗತ್ಪೂಜ್ಯರಾದ ಶ್ರೀಜಗದ್ಗುರು ಪಂಚಾಚಾರ್ಯರ ಪವಿತ್ರನಾಮಗಳು ಶ್ರುತಿಗಳಲ್ಲಿಯೂ, ಶಿವಾಗಮಗಳಲ್ಲಿಯೂ, ವ್ಯಾಸೋಕ್ತ ಪುರಾಣಗಳಲ್ಲಿಯೂ, ಮಹಾಭಾರತದಲ್ಲಿಯೂ, ಇತರ ಪ್ರಾಚೀನ ಗ್ರಂಥ ಗಳಲ್ಲಿಯೂ ಕಂಗೊಳಿಸುತ್ತಿರುವುವು. ಈ ಗ್ರಂಥಗಳೆಲ್ಲವೂ ಪರಮತೀಯ ರಿಂದಲೇ ಮುದ್ರಿಸಿ ಪ್ರಕಟಿಸಲ್ಪಟ್ಟಿರುವುವು. ವೀರಶೈವಮತಾಚಾರ್ಯರ ಪ್ರಭಾವವು ಈ ರೀತಿಯಾಗಿ ಪುರಾತನಗ್ರಂಥಗಳಲ್ಲಿ ಮೆರೆಯುತ್ತಿದ್ದರೂ, ಕೆಲಜನ ಅಸೂಯಾಪರರು ಇದನ್ನೆಲ್ಲಾ ಕಣ್ದೆರೆದು ನೋಡದೆ ಆ ಮಹಾ ತ್ಮರ ಬಗ್ಗೆ ಮನಸ್ಸಿಗೆ ಬಂದಂತೆ ನುಡಿಯುತ್ತಿರುವುದು ಎಷ್ಟೂ ಸರಿಯಾ ದುದಲ್ಲ. ವಕ್ರಮಾರ್ಗಿಗಳು ಇನ್ನು ಮುಂದಾದರೂ ತಮ್ಮ ವಕ್ರಮಾರ್ಗ ವನ್ನು ಬಿಟ್ಟು ಆ ಪ್ರಮಥಪುಂಗವರಲ್ಲಿ ನಿರ್ಮಲವಾದ ಭಕ್ತಿಯನ್ನಿಟ್ಟು ಮುಕ್ತಿಫಲಭಾಗಿಗಳಾಗಬೇಕೆಂದಾಶಿಸುತ್ತೇನೆ.



# ಶ್ರೀಜಗದ್ಗುರು ಪಂಚಾಚಾರ್ಯರ ಬಗ್ಗೆ ಸುಪ್ರಸಿದ್ಧ ಗ್ರಂಥಕಾರರ ಅಭಿಪ್ರಾಯಗಳು



ವೀರಶೈವಮತಸ್ಥಾಪಕರಾದ ಶ್ರೀಜಗದ್ಗುರು ಪಂಚಾಚಾರ್ಯರ ವಿಷಯದಲ್ಲಿ ವ್ಯಾಸಮಹರ್ಷಿಯೇ ಮೊದಲಾದ ಅನೇಕಜನ ಪ್ರಾಚೀನ ಗ್ರಂಥಕಾರರು ತಮ್ಮ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವ ವಿಷಯವನ್ನು "ಪ್ರಾಚೀನ ಗ್ರಂಥಗಳಲ್ಲಿ ಪಂಚಾಚಾರ್ಯರ ಪವಿತ್ರನಾಮಗಳು" ಎಂಬ ಲೇಖದಲ್ಲಿ ಸಪ್ರಮಾಣವಾಗಿ ಪ್ರತಿಪಾದಿಸಲಾಗಿದೆ. ಆದರೆ ಈಗ ಈ ಮಹಾತ್ಮರ ಬಗ್ಗೆ ಯೂರೋಪಿಯನ್ ಪಂಡಿತರೂ, ಪರಮತೀಯ ಸುಪ್ರಸಿದ್ಧಪುರುಷರೂ ತಾವು ಬರೆದಿರುವ ಗ್ರಂಥಗಳಲ್ಲಿ ಯಾವ ರೀತಿ ಉಲ್ಲೇಖಿಸಿರುವರೆಂಬ ವಿಷಯವನ್ನು ಇಲ್ಲಿ ವಿಮರ್ಶಿಸುವುದಾಗುವುದು.

ಮಿ॥ ಇ. ಥರ್ಸಟನ್ ಎಂಬವರು ಬರೆದಿರುವ "ಕ್ಯಾಸ್ಟ್ಸ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ" ಎಂಬ ಗ್ರಂಥದ ೪ ನೆಯ ಭಾಗದ ೨೬೪–೨೬೫ ನೆಯ ಪುಟಗಳಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

**Mr. E. Thurston** in his work **Castes and Tribes of Southern India** Vol. IV Pages 264-265 quotes as follows:

"The five great gotrakartas established five great Religious Centres in different parts of India viz: **Ekorama** at Kedara in the Himalayas, **Vishwacharya** at Benares, **Marula-**

**charya** at Ujjain, **Panditacharya** at Srishaila in Cudapa District and **Renukacharya** at Balehalli or Balehonnur in Koppa Taluk (of Mysore), at all of which places the Maths still exist. The Heads of these Maths have geographically divided the Lingayats into five great divisions and each Head exercises spiritual control within his own legitimate sphere, though all of them have a general jurisdiction over all the Lingayats generally. Each of these mutts called Simhasanas (Thrones) has Submutts in important popular centres under the management of Pattadaswamis. Each Submutt has a number of branch mutts, called Gurusthala Mutts under it and these latter are established wherever a community of Lingayats exists."

"ಈ ಐವರು ಮಹಾಗೋತ್ರಕರ್ತರು ಭರತಖಂಡದ ಬೇರೆ ಬೇರೆ ಭಾಗಗಳಲ್ಲಿ ಐದು ದೊಡ್ಡ ಮಠಗಳನ್ನು ಸ್ಥಾಪಿಸಿದರು. ಏಕೋರಾಮಾರಾಧ್ಯರು ಹಿಮಾಲಯದಲ್ಲಿರುವ ಕೇದಾರಕ್ಷೇತ್ರದಲ್ಲಿಯೂ, ವಿಶ್ವಾರಾಧ್ಯರು ಕಾಶೀಕ್ಷೇತ್ರದಲ್ಲಿಯೂ, ಮರುಳಾರಾಧ್ಯರು ಉಜ್ಜಯಿನಿಯಲ್ಲಿಯೂ, ಪಂಡಿತಾಚಾರ್ಯರು ಕಡಪಾ ಡಿಸ್ಟ್ರಿಕ್ಟಿಗೆ ಸೇರಿದ ಶ್ರೀಶೈಲದಲ್ಲಿಯೂ, ರೇಣುಕಾಚಾರ್ಯರು ಮೈಸೂರು ದೇಶದ ಕೊಪ್ಪ ತಾಲೂಕು ಬಾಳೇಹಳ್ಳಿ ಅಥವಾ ಬಾಳೇಹೊನ್ನೂರಿನಲ್ಲಿಯೂ ಮಠಗಳನ್ನು ಸ್ಥಾಪಿಸಿದರು. ಆ ಮಠಗಳು ಈಗಲೂ ಆಯಾ ಸ್ಥಳಗಳಲ್ಲಿಯೇ ಇವೆ. ಈ ಮಠಗಳ ಅಧಿಪತಿಗಳು ಭೂಗೋಳಕ್ಕನುಸಾರವಾಗಿ ವೀರಶೈವರನ್ನು

ಐದು ದೊಡ್ಡ ಭಾಗಗಳನ್ನಾಗಿ ವಿಭಾಗಿಸಿರುವರು. ಎಲ್ಲ ವೀರಶೈವರ ಮೇಲೂ ಸಾಮಾನ್ಯವಾಗಿ ಇವರಿಗೆ ಅಧಿಕಾರವ್ಯಾಪ್ತಿಯಿದ್ದರೂ ತಮ್ಮ ತಮ್ಮ ಆಡಳಿತಕ್ಕೆ ಒಳಪಟ್ಟ ಭಾಗಗಳಲ್ಲಿ ಮತಾಧಿಕಾರವನ್ನು ನಡೆಯಿಸುತ್ತಿದ್ದಾರೆ. ಸಿಂಹಾಸನಗಳೆಂದು ಕರೆಯಲ್ಪಡುವ ಈ ಮಠಗಳು ಪ್ರಸಿದ್ಧವಾದ ಮುಖ್ಯ ಮುಖ್ಯ ಪ್ರದೇಶಗಳಲ್ಲಿ ಪಟ್ಟದಸ್ವಾಮಿಗಳ ಅಧೀನದಲ್ಲಿ ಶಾಖಾಮಠಗಳನ್ನು ಹೊಂದಿವೆ. ಈ ಶಾಖಾಮಠಗಳು ಗುರುಸ್ಥಲಮಠಗಳೆಂದು ಕರೆಯಲ್ಪಡುವ ಅನೇಕ ಉಪಶಾಖಾಮಠಗಳನ್ನು ಹೊಂದಿವೆ. ಈ ಉಪಶಾಖಾಮಠಗಳು ವೀರಶೈವರಿರುವ ಕಡೆಯಲ್ಲೆಲ್ಲ ಸ್ಥಾಪಿಸಲ್ಪಟ್ಟಿವೆ" ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿದೆ.

ಡಾ|| ಜೆ. ಎನ್. ಫಾರ್ಕ್ಯುಹಾರ್, ಎಂ.ಎ., ಡಿ.ಲಿಟ್. ಎಂಬವರು ಬರೆದಿರುವ " ದಿ ರಿಲಿಜಿಯಸ್ ಕ್ವೆಸ್ಟ್ ಆಫ್ ಇಂಡಿಯಾ" ಎಂಬ ಗ್ರಂಥದಲ್ಲಿ ೨೫೯ ನೆಯ ಪುಟದಿಂದ ವೀರಶೈವಮತದ ಇತಿಹಾಸವು ಬರೆಯಲ್ಪಟ್ಟಿದ್ದು, ಆ ಸಂದರ್ಭದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿದೆ.

**Dr. J. N. Farquhar, M.A . D.Litt.** in his book entitled **The Religious Quest of India**, gives the history of Veerasaivas beginning from page 259. He says that:

"The tradition is that the sect was founded by five Ascetics–**Ekorama, Panditaradhya. Revana, Marula** and **Vishwaradhya** who are said to have sprung from the heads of Shiva, incarnate, age after age. These are regarded very ancient.

"ಪ್ರತಿ ಯುಗದಲ್ಲಿಯೂ ಶಿವನ ಮುಖಗಳಿಂದ ಅವತರಿಸಿದ ಏಕೋರಾಮಾರಾಧ್ಯ, ಪಂಡಿತಾರಾಧ್ಯ, ರೇವಣಾರಾಧ್ಯ, ಮರುಲಾರಾಧ್ಯ ಮತ್ತು ವಿಶ್ವಾರಾಧ್ಯ ಎಂಬ ಐದು ಜನ ಯತಿಗಳಿಂದ ಈ ಮತವು ಸ್ಥಾಪಿಸಲ್ಪಟ್ಟಿತು ಇವರು ಬಹು ಪ್ರಾಚೀನಕಾಲದವರು. ಇದು ಇತಿಹಾಸಪ್ರಸಿದ್ಧವಾಗಿರುವುದು." ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿರುವುದು.

ಮಿ॥ ಸಿ. ಪಿ. ಬ್ರೌನ್ ಎಂಬವರು ಬರೆದಿರುವ "ಮದ್ರಾಸ್ ಜರ್ನಲ್ ಆಫ್ ಲಿಟರೇಚರ್ ಅಂಡ್ ಸೈನ್ಸ್" ಎಂಬ ಗ್ರಂಥದ ೧೧ ನೆಯ ಭಾಗದ ೧೫೩ ನೆಯ ಪುಟದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

**Mr. C. P. Brown** in his work **Madras Journal of Literature and Science** Vol. XI (Printed 1840 A.D.) Page 153, quotes as follows :—

"These four Sages are named **Revanaradhya, Marularadhya, Ekoramaradhya** and **Panditaradhya.** In four ages it is said these four successively appeared."

"ರೇವಣಾರಾಧ್ಯ, ಮರುಲಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಎಂಬ ಹೆಸರಿನ ನಾಲ್ಕು ಜನ ಯತಿಗಳು ನಾಲ್ಕು ಯುಗಗಳಲ್ಲಿಯೂ ಅನುಕ್ರಮವಾಗಿ ಅವತರಿಸಿದರೆಂದು ಹೇಳಲ್ಪಟ್ಟಿದೆ" ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿದೆ.

ಡಾ॥ ಸರ್ ಆರ್. ಜಿ. ಭಾಂಡಾರಕರ್ ಎಂಬವರು ಬರೆದಿರುವ "ವೈಷ್ಣವಿಜಂ ಶೈವಿಜಂ ಅಂಡ್ ಮೈನರ್ ರಿಲಿಜಿಯಸ್ ಸಿಸ್ಟಮ್ಸ್"

ಎಂಬ ಗ್ರಂಥದ ೧೩೨ ನೆಯ ಪುಟದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

**Dr. Sir R. G. Bhandarkar** in his work **Vaisnavism, Saivism and minor Religious systems.** Page 132 quotes as follows :—

102. In connection with Dīkṣās, or initiatory ceremonies, as, for instance, that which one has to go through when one has to choose a Guru or preceptor, it is necessary to place four metallic vessels full of water at the four cardinal points and one in the middle. This last belongs to the person to be consecrated as Guru, or preceptor, who is supposed to represent an old Ācārya, or teacher,of the name of **Vishwaradhya** and the other four to four other priests chosen as having been brought up in the schools of **Revanasiddha, Marulasiddha, Ekorama** and **Panditaradhya** and connected with certain Maṭhas or establishments. The same list is given in another treatise. These five vessels are consecrated to the five faces or forms of Śiva, Sadyojāta, etc., mentioned in a former section. The Ācāryas, or teachers, named above are believed to have sprung from the five forms of Śiva in this Kali age. Others bearing other names, born in other ages of the world, are also mentioned.

" ದೀಕ್ಷೆಯನ್ನು ಮಾಡುವ ಸಂದರ್ಭದಲ್ಲಿ ದೀಕ್ಷೆಯನ್ನು ಮಾಡಿಸಿಕೊಳ್ಳತಕ್ಕವನು ಒಬ್ಬ ಗುರುವನ್ನು ಆಶ್ರಯಿಸಬೇಕು. ಆ ಸಮಯದಲ್ಲಿ ಜಲಪೂರ್ಣವಾದ ನಾಲ್ಕು ಲೋಹದ ಕಲಶಗಳನ್ನು ನಾಲ್ಕು ದಿಕ್ಕುಗಳಲ್ಲಿಯೂ, ಮತ್ತೊಂದು ಕಲಶವನ್ನು ಮಧ್ಯದಲ್ಲಿಯೂ ಸ್ಥಾಪಿಸಬೇಕು. ಮಧ್ಯಕಲಶವು ಗುರುಸ್ಥಾನವನ್ನು ಅಲಂಕರಿಸತಕ್ಕವರಿಗೆ ಸೇರುತ್ತದೆ. ಇವರು ವಿಶ್ವಾರಾಧ್ಯ ಎಂಬ ಹೆಸರಿನ ಪ್ರಾಚೀನ ಆಚಾರ್ಯರ ಪ್ರತಿನಿಧಿಗಳಾಗಿ ಎಣಿಸಲ್ಪಡುತ್ತಾರೆ. ಮಿಕ್ಕ ನಾಲ್ಕು ಕಲಶಗಳು ರೇವಣಸಿದ್ಧ, ಮರುಲಸಿದ್ಧ, ಏಕೋರಾಮ ಮತ್ತು ಪಂಡಿತಾರಾಧ್ಯ ಎಂಬ ಆಚಾರ್ಯರಿಗೆ ಸಂಬಂಧಪಟ್ಟ ನಾಲ್ಕು ಜನ ಗುರುಗಳಿಗೆ ಸಲ್ಲುತ್ತವೆ. ಬೇರೆ ಗ್ರಂಥಗಳಲ್ಲಿಯೂ ಇವೇ ಹೆಸರುಗಳು ಕೊಡಲ್ಪಟ್ಟಿರುತ್ತವೆ. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಈ ಐದು ಕಲಶಗಳು ಶಿವನ ಸದ್ಯೋಜಾತಾದಿ ಪಂಚಮುಖಗಳಾಗಿ ಪ್ರತಿಷ್ಠಿಸಲ್ಪಡುತ್ತವೆ. ಮೇಲೆ ಹೇಳಿದ ಆಚಾರ್ಯರು ಈ ಕಲಿಯುಗದಲ್ಲಿ ಶಿವನ ಪಂಚಮುಖಗಳಿಂದ ಅವತರಿಸಿದರೆಂಬುದು ಪ್ರಸಿದ್ಧವಾಗಿದೆ. ಇವರು ಇತರ ಯುಗಗಳಲ್ಲಿಯೂ ಬೇರೆ ಬೇರೆ ಹೆಸರುಗಳಿಂದ ಅವತಾರಮಾಡಿದ ವಿಷಯವೂ ಸಹ ಹೇಳಲ್ಪಟ್ಟಿದೆ." ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿದೆ.

ರಾ॥ ಬ॥ ಎಲ್. ಕೆ. ಅನಂತಕೃಷ್ಣ ಅಯ್ಯರ್ ಎಂಬವರು ಬರೆದಿರುವ "ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್" ಎಂಬ ಪುಸ್ತಕದ ೨ ನೆಯ ಭಾಗದ ೩೪ ನೆಯ ಪುಟದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

Rao Bahadur **L. K. Ananta Krishna Iyer** in his work " **The Mysore Tribes and Castes** " vol. II page 34 quotes as follows:—

"There are four Acharyas or Gurus (Preceptors) among them, namely **Revanaradhya, Maruladradhya, Ekoramaradhya** and **Panditaradhya**. In the four ages, it is said that these four successively appeared as precursors to Basava."

"ರೇವಣಾರಾಧ್ಯ, ಮರುಲಾರಾಧ್ಯ, ಏಕೋರಾಮಾರಾಧ್ಯ, ಮತ್ತು ಪಂಡಿತಾರಾಧ್ಯ ಎಂಬ ನಾಲ್ಕು ಜನ ಆಚಾರ್ಯರು ಇರುತ್ತಾರೆ. ಇವರು ನಾಲ್ಕು ಯುಗಗಳಲ್ಲಿಯೂ ಅನುಕ್ರಮವಾಗಿ ಅವತಾರಮಾಡಿದ ರೆಂದು ಹೇಳಲ್ಪಟ್ಟಿದೆ. ಇವರು ಬಸವನಿಗಿಂತಲೂ ಬಹು ಪ್ರಾಚೀನರು." ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿದೆ.

ಶ್ರೀಮಾನ್ ಜಿ. ಆರ್. ಜೋಯಿಸರ, ಎಂ.ಎ. (ಆನರ್ಸ್), ಎಫ್.ಆರ್.ಇ.ಎಸ್. ಎಂಬವರು ಬರೆದಿರುವ "ಪಾಲಿಟಿಕ್ಸ್, ಫಿಲಾಸಫಿ ಅಂಡ್ ಫಾಂಟಸಿ" ಎಂಬ ಗ್ರಂಥದ ೧೬೦ ನೆಯ ಪುಟದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

**Mr. G. R. Josyer,** M.A., (HON.) F.R.E.S. in his work "**Politics, Philosophy** and **Phantasy**" Page 160 quotes as follows—

"All this amply bears out the fact that the Shiva cult was widespread in the olden times, and that the **Jagadguru Panchacharyas** must have been the real propagators of the faith. At what time exactly they lived is not known. That it must have been in very remote antiquity there is no doubt. It is also believed that they

were not the offsprings of any human parents, but were evolved out of five famous and sacred Shiva Lingas. It is reputed that **Sree Renukacharya** evolved out of Somanatha Linga of Kollipaki, **Darukacharya** out of the Siddheswara Linga of Ujjain, **Ekoramaradhya** out of the Ramanatha Linga of Draksharama, **Panditaradya** out of the Mallikarjuna Linga of Srisaila, and **Vishwaradhya** out of the Vishwanatha Linga of Benares. These five saintly beings promulgated the doctrine of Veerashaivism widely, and in order to safeguard the stability and permanance of the religion, established five important Mutts or Bishoprics. These five are at Balehonnur in Kadur District, in Ujjain near Bellary, in sacred Himavatkedar near Garhwal, at Sri Saila near Kurnool and at Benares.

" ಪುರಾತನಕಾಲದಲ್ಲಿ ಶೈವಮತವು ಸರ್ವತ್ರ ವ್ಯಾಪಕವಾಗಿತ್ತೆಂಬ ವಿಷಯವೂ, ಈ ಮತದ ನಿಜವಾದ ಪ್ರಚಾರಕರು ಶ್ರೀ ಜಗದ್ಗುರು ಪಂಚಾಚಾರ್ಯರೇ ಆಗಿರಬೇಕೆಂಬ ವಿಷಯವೂ ಇವುಗಳಿಂದ ಚೆನ್ನಾಗಿ ವ್ಯಕ್ತವಾಗುತ್ತದೆ. ಇವರು ಯಾವ ಕಾಲದಲ್ಲಿದ್ದರೆಂಬುದು ತಿಳಿದಿಲ್ಲ. ಆದರೆ ಬಹು ಪ್ರಾಚೀನರು ಎಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಇವರು ಮಾನವಗರ್ಭದಿಂದ ಜನಿಸದೆ ಐದು ಪ್ರಸಿದ್ಧ ಮತ್ತು ಪವಿತ್ರವಾದ ಶಿವಲಿಂಗಗಳಿಂದ ಅವತರಿಸಿದರೆಂಬುದು ಪ್ರಖ್ಯಾತವಾಗಿದೆ. ಶ್ರೀ ರೇಣುಕಾಚಾರ್ಯರು ಕೊಲ್ಲಿಪಾಕಿಯಲ್ಲಿರುವ ಸೋಮನಾಥಲಿಂಗದಿಂದಲೂ,

ದಾರುಕಾಚಾರ್ಯರು ಉಜ್ಜಯಿನಿಯಲ್ಲಿರುವ ಸಿದ್ಧೇಶ್ವರಲಿಂಗದಿಂದಲೂ, ಏಕೋರಾಮಾರಾಧ್ಯರು ದ್ರಾಕ್ಷಾರಾಮದಲ್ಲಿರುವ ರಾಮನಾಥಲಿಂಗ ದಿಂದಲೂ, ಪಂಡಿತಾರಾಧ್ಯರು ಶ್ರೀಶೈಲದಲ್ಲಿರುವ ಮಲ್ಲಿಕಾರ್ಜುನಲಿಂಗ ದಿಂದಲೂ, ಮತ್ತು ವಿಶ್ವಾರಾಧ್ಯರು ಕಾಶೀಕ್ಷೇತ್ರದಲ್ಲಿರುವ ವಿಶ್ವನಾಥಲಿಂಗ ದಿಂದಲೂ ಅವತರಿಸಿದರೆಂಬುದು ಪ್ರಸಿದ್ಧವಾಗಿದೆ. ಈ ಐದು ಜನ ಮಹಾತ್ಮರು ವೀರಶೈವ ಸಿದ್ಧಾಂತವನ್ನು ಸರ್ವತ್ರ ಪ್ರಚಾರಮಾಡಿದರಲ್ಲದೆ, ಈ ಮತದ ರಕ್ಷಣೆಗಾಗಿ ಐದು ಮುಖ್ಯ ಮಠಗಳನ್ನು ಸ್ಥಾಪಿಸಿದರು. ಈ ಐದು ಮಠಗಳು ಕಡೂರು ಡಿ|| ಬಾಳೆಹೊನ್ನೂರಿನಲ್ಲಿಯೂ, ಬಳ್ಳಾರಿ ಡಿ|| ಉಜ್ಜಯಿನಿಯಲ್ಲಿಯೂ, ಗಢವಾಲ ಡಿ|| ಹಿಮವತ್ಕೇದಾರದಲ್ಲಿಯೂ, ಕರ್ನೂಲ್ ಡಿ|| ಶ್ರೀಶೈಲದಲ್ಲಿಯೂ ಮತ್ತು ಕಾಶಿಯಲ್ಲಿಯೂ ಇರುತ್ತವೆ." ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿದೆ.

ಕಾಶೀಕ್ಷೇತ್ರನಿವಾಸಿ ಕೈ|| ರಾಮದಾಸಗೌಡ ಎಂ.ಎ. ಎಂಬವರು ಬರೆದಿರುವ "ಹಿಂದುತ್ವ" ಎಂಬ ಗಂಥದ ೬೫೪ನೆಯ ಪುಟದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವದು.

"ಇಸ್ ಪ್ರಕಾರ ವೀರಶೈವ ಸಂಪೂರ್ಣ ಜಗತ್‌ಕೋ ಶಿವಮಯ ಮಾನತಾ ಹೈ। ವೀರಶೈವೋಂಕೇ ಪಂಚಾಚಾರ್ಯ ಭಗವಾನ್‌ಕೇ ಇನ್ಹೀ ಪಾಂಚೋ ಮುಖೋಂಸೇ ಪ್ರಕಟ ಹುಏ ಹೈ। ಈಶಾನಸೆ ವಿಶ್ವಾರಾಧ್ಯ, ತತ್ಪುರುಷಸೇ ಪಂಡಿತಾರಾಧ್ಯ, ಅಘೋರಸೆ ಏಕೋರಾಮಾಚಾರ್ಯ, ವಾಮದೇವಸೆ ಮರುಲಾರಾಧ್ಯ ಔರ್ ಸದ್ಯೋಜಾತಸೇ ರೇವಣಾರಾಧ್ಯ। ಯೇ ಪಾಂಚೋ ಮಾಹೇಶ್ವರ ನಾಮಕೆ ಜಗದ್ಗುರು ಕಲೀಕೆ ಆರಂಭಮೆ ಹುಏ।"

"ವೀರಶೈವರು ಈರೀತಿ ಸಮಸ್ತ ಪ್ರಪಂಚವು ಶಿವಮಯವೆಂದು ತಿಳಿಯುತ್ತಾರೆ. ವೀರಶೈವಮತಾಚಾರ್ಯರಾದ ಪಂಚಾಚಾರ್ಯರು ಭಗವಂತನಾದ ಶಿವನ ಐದು ಮುಖಗಳಿಂದ ಅವತರಿಸಿದರು. ಈಶಾನ ಮುಖದಿಂದ

ವಿಶ್ವಾರಾಧ್ಯ, ತತ್ಪುರುಷ ಮುಖದಿಂದ ಪಂಡಿತಾರಾಧ್ಯ, ಅಘೋರ ಮುಖದಿಂದ ಏಕೋರಾಮಾರಾಧ್ಯ, ವಾಮದೇವಮುಖದಿಂದ ಮರುಲಾರಾಧ್ಯ, ಸದ್ಯೋಜಾತ ಮುಖದಿಂದ ರೇವಣಾರಾಧ್ಯ ಎಂಬ ಐದು ಜನ ಜಗದ್ಗುರುಗಳು ಕಲಿಯುಗದ ಆರಂಭದಲ್ಲಿ ಅವತರಿಸಿದರು."

ಇದೇ ಪುಸ್ತಕದ ೬೯೬ ನೆಯ ಪುಟದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

ಇನ್ ಪಾಂಚೋ ಸ್ಥಾನೋಂಮೆ ವೀರಶೈವೋಂಕೆ ಬಡೆ ಬಡೆ ಮಠ ಹೈ। ಉತ್ತರಖಂಡಮೆ ಶ್ರೀಕೇದಾರೇಶ್ವರಮೆ ಬಹುತ್ ಪ್ರಾಚೀನ ಮಠ ಹೈ। ಉಸಕೀ ಪ್ರಾಚೀನತಾಕಾ ಬಹುತ್ ಭಾರೀಪ್ರಮಾಣ ಏಕ ತಾಮ್ರ ಶಾಸನ ಹೈ।...............ಕಾಶೀಮೇ ಭಗವಾನ್ ವಿಶ್ವಾರಾಧ್ಯಕಾ ಸ್ಥಾನ ಜಂಗಮಬಾಡೀ (ವಾಟಿಕಾ) ಮಠಕೆ ನಾಮಸೆ ಪ್ರಸಿದ್ಧ ಹೈ। ಯಹ ಮಠ ಭೀ ಬಹುತ್ ಪ್ರಾಚೀನ ಹೈ। ಇಸ್ ಮಠಕೆ ಮಲ್ಲಿಕಾರ್ಜುನ ಜಂಗಮ ನಾಮಕ ಶಿವಯೋಗೀಕೋ ಕಾಶೀರಾಜ ಜಯನಂದ ದೇವನೆ ವಿಕ್ರಮ ಸಂವತ್ ೬೩೧ ಮೇ ಪ್ರಬೋಧಿನೀ ಏಕಾದಶೀಕೋ ಭೂಮಿದಾನ ಕಿಯಾಥಾ। ಇಸ್ ತರಹ ಯಹ ಶಾಸನ ಲಗಭಗ ಪೌನೆ ಚೌದಹ ಸೌ ಬರಸೋಂ ಕಾ ಹುಆ, ಇಸ್‌ಕೆ ಬಾದಕೆ ತೋ ಅನೇಕ ದಾನಪತ್ರ ಹೈ। ಇಸ್ ಮಠಕೇ ಪಾಸ್ ಬಾರಹ ಗಾಂವ ಹೈ। ಇನಕೆ ಸಿವಾ ಗೌದೌಲಿಯಾಸೆ ಲೇಕರ್ ದಕ್ಖಿನಮೆ ಬಂಗಾಲೀ ಟೋಲಾಕೆ ಡಾಕ-ಘರ್ ತಕ್ ಔರ್ ಪೂರಬಮೇ ಅಗಸ್ತ್ಯಕುಂಡಸೆ ಪಶ್ಚಿಮಮೆ ರಾಮಪುರಾತಕ್ ಸಾರಾ ಸ್ಥಾನ ಜಂಗಮಬಾಡೀ ಮುಹಲ್ಲಾ ಕಹಲಾತಾ ಹೈ। ಜೋ ಅಧಿಕಾಂಶ ಮಠಕಾ ಹೀ ಹೈ। ಇನಕೇ ಸಿವಾ ಮಾನಸಸರೋವರ, ಧನಕಾಮೇಶ್ವರ, ಮನಃಕಾಮೇಶ್ವರ ಏವಂ ಸಾಕ್ಷೀವಿನಾಯಕಕೇ ಸಾಮನೇಕಾ ಸ್ಥಾನ ಇಸೀ ಮಠಕೆ ಅಧೀನ ಹೈ। ಯಹ ಮಠ ಶಿವಲಿಂಗಮಯ ಹೈ। ಇಸಕೆ ಅಧೀನ ರೋಹಿತಾಶ್ವ ಕೋ ಜಹಾ ಸಾಪನೆ ಕಾಟಾಥಾ ವಹ ಬಗೀಚಾ ಭೀ ಹೈ। ಯಹ ಮಠ ಕಾಶೀಮೆ ಸಬಸೆ ಪುರಾನಾ ಹೈ, ಐತಿಹಾಸಿಕ ಹೈ, ಔರ್ ದರ್ಶನೀಯ ಹೈ।"

"ಈ ಐದು ಸ್ಥಾನಗಳಲ್ಲಿ ವೀರಶೈವರ ದೊಡ್ಡ ದೊಡ್ಡ ಮಠಗಳಿವೆ. ಉತ್ತರಖಂಡದಲ್ಲಿರುವ ಶ್ರೀಕೇದಾರೇಶ್ವರಕ್ಷೇತ್ರದಲ್ಲಿ ಬಹು ಪುರಾತನವಾದ ಒಂದು ಮಠವಿರುತ್ತದೆ. ಆ ಮಠದ ಪ್ರಾಚೀನತ್ವವನ್ನು ಪ್ರತಿಪಾದಿಸತಕ್ಕ ಮಹಾಪ್ರಮಾಣಭೂತವಾದ ಒಂದು ತಾಮ್ರಶಾಸನವಿರುತ್ತದೆ."

"ಕಾಶೀಕ್ಷೇತ್ರದಲ್ಲಿ ಶ್ರೀವಿಶ್ವಾರಾಧ್ಯರ ಸ್ಥಾನವು ಜಂಗಮವಾಡೀ ಮಠವೆಂಬ ಹೆಸರಿನಿಂದ ಪ್ರಸಿದ್ಧವಿರುತ್ತದೆ. ಈ ಮಠವಾದರೂ ಬಹು ಪ್ರಾಚೀನವಾಗಿದೆ. ಈ ಮಠದ ಮಲ್ಲಿಕಾರ್ಜುನಜಂಗಮ ಎಂಬ ಹೆಸರಿನ ಶಿವಯೋಗಿಗಳಿಗೆ ಕಾಶೀರಾಜನಾದ ಜಯನಂದದೇವನು ವಿಕ್ರಮಸಂವತ್ ೬೩೧ ರಲ್ಲಿ ಪ್ರಬೋಧಿನೀ ಏಕಾದಶೀ ದಿವಸ ಭೂದಾನವನ್ನು ಮಾಡಿರುವನು. ಈ ಶಾಸನವು ಸುಮಾರು ೧೩೦೫ ವರ್ಷಗಳ ಪೂರ್ವದ್ದಾಗಿದೆ. ಇದಲ್ಲದೆ ಇನ್ನೂ ಅನೇಕ ದಾನಪತ್ರಗಳಿರುವುವು. ಈ ಮಠದ ಅಧೀನದಲ್ಲಿ ೧೨ ಗ್ರಾಮಗಳಿರುವುವು. ಇದಲ್ಲದೆ ಗೌದೌಲಿಯಾದಿಂದ ಹಿಡಿದು ದಕ್ಷಿಣದಲ್ಲಿ ಬಂಗಾಲೀಟೋಲಾ ಪೋಸ್ಟ್ ಆಫೀಸಿನವರೆಗೆ ಮತ್ತು ಪೂರ್ವದಿಕ್ಕಿನಲ್ಲಿ ಅಗಸ್ತ್ಯಕುಂಡದಿಂದ ಹಿಡಿದು ಪಶ್ಚಿಮದಲ್ಲಿ ರಾಮಪುರದವರೆಗೆ ಎಲ್ಲ ಸ್ಥಾನವೂ "ಜಂಗಮವಾಡೀ ಮುಹಲ್ಲಾ" ಎಂದು ಕರೆಯಲ್ಪಡುತ್ತದೆ. ಇದರಲ್ಲಿ ಅಧಿಕಾಂಶವು ಈ ಮಠದ್ದೇ ಆಗಿದೆ. ಇದಲ್ಲದೆ ಮಾನಸ ಸರೋವರ, ಧನಕಾಮೇಶ್ವರ, ಮನಃಕಾಮೇಶ್ವರ ಮತ್ತು ಸಾಕ್ಷೀವಿನಾಯಕನ ಮುಂಭಾಗದ ಸ್ಥಳ ಇವೆಲ್ಲವೂ ಮಠದ ಅಧೀನದಲ್ಲಿಯೇ ಇವೆ. ಈ ಮಠವು ಶಿವಲಿಂಗಗಳಿಂದ ತುಂಬಿಹೋಗಿದೆ. ಹರಿಶ್ಚಂದ್ರನ ಮಗನಾದ ರೋಹಿತಾಶ್ವನನ್ನು ಸರ್ಪವು ಯಾವ ಸ್ಥಳದಲ್ಲಿ ಕಚ್ಚಿತ್ತೋ, ಆ ಉಪವನವೂ ಸಹ ಈ ಮಠದ ಆವರಣದಲ್ಲಿಯೇ ಇದೆ. ಈ ಮಠವು ಕಾಶೀಕ್ಷೇತ್ರದಲ್ಲಿ ಎಲ್ಲಕ್ಕಿಂತಲೂ ಬಹುಪ್ರಾಚೀನವಾಗಿದೆ, ಐತಿಹಾಸಿಕವಾಗಿದೆ ಮತ್ತು ದರ್ಶನೀಯವಾಗಿದೆ." ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿರುವುದು.

ಮಿ॥ ಎಫ್. ಕಿಟೆಲ್ ಎಂಬವರು ಬರೆದಿರುವ "ಕನ್ನಡ-ಇಂಗ್ಲಿಷ್ ಡಿಕ್ಷ್ನರಿ" ಎಂಬ ಗ್ರಂಥದ ೧೩೪೬ ನೆಯ ಪುಟದಲ್ಲಿ ಈ ಕೆಳಗೆ ಉದಾಹರಿಸಿರುವಂತೆ ಉಲ್ಲೇಖಿಸಲ್ಪಟ್ಟಿರುವುದು.

**Rev. F. Kittel** in his work "**Kannada-English Dictionary**" Page 1346 quotes as follows :—

**Renuka**—one of Shiva's Pramathas.

"ರೇಣುಕನು ಶಿವನ ಪ್ರಮಥಗಣಗಳಲ್ಲಿ ಒಬ್ಬನು."

ಎಂಬುದು ಮೇಲ್ಕಂಡ ಗ್ರಂಥಕರ್ತರ ಅಭಿಪ್ರಾಯವಾಗಿದೆ.

ಈ ರೀತಿ ಮಹಾಮಹಾಮೇಧಾವಿಗಳಾದ ಯೂರೋಪಿಯನ್ನರೂ, ಹಿಂದೂದೇಶದ ಸುಪ್ರಸಿದ್ಧ ಪರಮತೀಯ ಪಂಡಿತರೂ ಜಗನ್ಮಾನ್ಯಗಳಾದ ತಮ್ಮ ಗ್ರಂಥಗಳಲ್ಲಿ ವೀರಶೈವಮತಸ್ಥಾಪಕರಾದ ಶ್ರೀಜಗದ್ಗುರು ಪಂಚಾಚಾರ್ಯರು ಬಹು ಪ್ರಾಚೀನಕಾಲದವರೆಂದು ಸ್ಪಷ್ಟವಾಗಿ ಬರೆದಿದ್ದಾರೆ. ನಿಷ್ಪಕ್ಷಪಾತಿಗಳಾದ ಈ ಗ್ರಂಥಕರ್ತರ ಸದಭಿಪ್ರಾಯವನ್ನು ಸರ್ವರೂ ನಿರ್ಮಲಮನಸ್ಸಿನಿಂದ ವಿಮರ್ಶಿಸಿ, ಅನಾದಿಸಂಸಿದ್ಧರಾದ ಶ್ರೀಜಗದ್ಗುರು ಪಂಚಾಚಾರ್ಯರಲ್ಲಿ ಅನುಪಮವಾದ ಭಕ್ತಿಯನ್ನಿಟ್ಟು ಧನ್ಯರಾಗಬೇಕೆಂದು ಆಶಿಸುತ್ತೇವೆ.



# ಶ್ರೀಜಗದ್ಗುರು ಕಾಶೀಪೀಠದ ಪ್ರಾಚೀನತ್ವದ ಬಗ್ಗೆ ಕೋರ್ಟಿನ ತೀರ್ಪು.

ಶ್ರೀಭೂಕೈಲಾಸ ಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಶ್ರೀಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನಮಠ (ಜಂಗಮವಾಡೀಮಠ)ದ ಪ್ರಾಚೀನತ್ವವು ಲೋಕವಿಖ್ಯಾತವಾಗಿದೆ. ಈ ಮಹಾಪೀಠದಲ್ಲಿ ಈಗ್ಗೆ ಸುಮಾರು ೬೦-೭೦ ವರ್ಷಗಳ ಪೂರ್ವದಲ್ಲಿ "ಶ್ರೀವಿಶ್ವಾರಾಧ್ಯ ಬ್ಯಾಂಕ್" ಎಂಬ ಹೆಸರಿನಿಂದ ಒಂದು ಬ್ಯಾಂಕು ಸ್ಥಾಪಿಸಲ್ಪಟ್ಟಿತು. ಆ ಬ್ಯಾಂಕು ಕೆಲವು ದಿವಸಗಳವರೆಗೆ ಬಹು ಚೆನ್ನಾಗಿ ನಡೆಯಿತು. ಆದರೆ ಇತ್ತೀಚೆಗೆ ಯಾವ ಕಾರಣದಿಂದಲೋ ಬ್ಯಾಂಕು ಹೀನಸ್ಥಿತಿಗೆ ಬಂದಿತು. ಇದನ್ನು ತಿಳಿದು ಬ್ಯಾಂಕಿನಲ್ಲಿ ಹಣವನ್ನಿಟ್ಟವರೆಲ್ಲರೂ ಕೋರ್ಟಿನಲ್ಲಿ ದಾವೆಯನ್ನು ಮಾಡಿ ತಮ್ಮ ಹಣಕ್ಕಾಗಿ ಮಠದ ಆಸ್ತಿಯನ್ನು ತೆಗೆದುಕೊಳ್ಳುವ ಪ್ರಯತ್ನಮಾಡ ಹತ್ತಿದರು. ಹೀಗಾದರೆ ಮಠಕ್ಕೆ ಪೂರ್ವಕಾಲದ ರಾಜರಿಂದ ದಾನರೂಪವಾಗಿ ಕೊಡಲ್ಪಟ್ಟಿರುವ ಆಸ್ತಿಯೆಲ್ಲವೂ ಪರರ ಪಾಲಾಗುವುದೆಂದು ಭಾವಿಸಿ, ಆಗ್ಗೆ ಆ ಪೀಠಾಧಿಪತಿಗಳಾಗಿದ್ದ ಶ್ರೀಜಗದ್ಗುರು ಪಂಚಾಕ್ಷರಶಿವಾಚಾರ್ಯ ಮಹಾಸ್ವಾಮಿಗಳವರು ಪ್ರಾಚೀನ ರಾಜರಿಂದ ದಾನರೂಪವಾಗಿ ಬಂದಿರುವ ಆಸ್ತಿಯನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ೧೯೩೨ ನೆಯ ಇಸವಿಯಲ್ಲಿ ಬನಾರಸ್ ಸಬ್‌ಜಡ್ಜ್ ಕೋರ್ಟಿನಲ್ಲಿ ದಾವೆಯನ್ನು ಮಾಡಿದರು. ಸದರಿ ದಾವೆಯಲ್ಲಿ ಅನೇಕ ವಿಷಯಗಳು ಚರ್ಚಿಸಲ್ಪಟ್ಟವು. ಅದರಲ್ಲಿ ಶ್ರೀಜಗದ್ಗುರು ಪೀಠದ ಪ್ರಾಚೀನತ್ವವಿಷಯವು ವಿಶೇಷವಾಗಿ ಚರ್ಚಿಸಲ್ಪಟ್ಟಿತು. ಜಡ್ಜ್‌ಸಾಹೇಬರು ಶ್ರೀಪೀಠದ ದಾನಶಾಸನಗಳನ್ನೆಲ್ಲ ಕೂಲಂಕಷವಾಗಿ ವಿಮರ್ಶಿಸಿ, ಪೀಠದ ಪ್ರಾಶಸ್ತ್ಯವನ್ನು ಬಹು ಚೆನ್ನಾಗಿ ತೀರ್ಮಾನಿಸಿರುವರು. ಅವರು ಬರೆದಿರುವ ಜಡ್ಜ್‌ಮೆಂಟಿನ ಮುಖ್ಯ ಭಾಗವು ಈ ಮುಂದೆ ಉದಾಹರಿಸಲ್ಪಟ್ಟಿರುವುದು.

# SUIT No. 12 OF 1932
# IN THE SUB-JUDGE'S COURT, BENARES CITY

---

The above is a suit filed by Sri Jagadguru Panchakshara Sivacharya Mahaswamy, Jangamawadi Math, Benares City, against certain creditors of so-called Sri Vishwaradhya Bank. Judgment was delivered on 27th Nov. 1933. Portions from it relating to the antiquity of the Math have been given below :

## JUDGMENT

**J. N. Farquhar M.A., D. Litt.**, in his book entitled **the Religious Quest of India** gives the history of Virasaivas beginning from page 259. He says that " the tradition is that the sect was founded by five ascetics–**Ekorama, Panditaradhya, Revana, Marula** and **Vishwaradhya**–who are said to have sprung from the heads of Shiva, incarnate age after age. These are regarded very ancient, and Basava is said to have been but the reviver of the faith in the 12th century. Later on he remarks that the five ascetics were probably Basava's contemporaries, but he admits that this is a point on which an opinion cannot be expressed with certainty." Then he goes on to point out the organization of the sect and states that originally the following five

monasteries were established, the first Heads of which were the five ascetics mentioned above—

| Monasteries. | First Mahants. |
|---|---|
| 1. **Kedar Nath,** *Himalays* | **Ekorama** |
| 2. **Srisaila,** *Near Nandyal* | **Panditaradhya** |
| 3. **Balehalli,** *West Mysore* | **Revana** |
| 4. **Ujjini.** *Bellary, Boundary Mysore* | **Marula** |
| 5. **Benares** | **Vishwaradhya** |

In the **Mysore Gazetteer** at page 477 at the top we find that Lingayats do possess Maths. In the **Gazetteer of Bijapur** District (Bombay Presidency) also, we find that the Lingayats do possess Maths. In this book (1884 edition) the description of Lingayats is given in greater detail (see pages 219 to 280). At page 238, the five original pontifical thrones are mentioned. Strangely enough, the Benares Math is not mentioned. It is said that the fifth throne is an empty one. Probably the reference is to the Math in suit. In the **Sholapur Gazetteer** (1884 Edition) page 75, the Lingayats are described and there is nothing in it to show that they cannot possess a Math.

Lastly I may refer to **Castes and Tribes of Southern India by Thurston** (1909 Editon). At the bottom of page 264 the author refers to the

establishment of the five great religious centres of the Lingayats in India. The Vishwaradhya Math at Benares, that is to say the Math in dispute, is also mentioned. He mentions specifically that at all of these five centres, "the Maths still exist." He goes on to say that "the Heads of these Maths have geographically divided the Lingayats into five great divisions, and each Head exercises spritual control within his own legitimate sphere, though all of them have a general jurisdiction over all the Lingayats generally. Each of these Maths, called Simhasanas (thrones), has sub-maths in important popular centres under the management of Pattada-swamis. Each sub-math has a number of branch maths, called Gurusthala maths under it, and these latter are established whereever a community of Lingayats exists. The rights and duties of the Swamis of these Maths are to preside on all ceremonial occasions, to receive their dues, to impart religious instructions, and to exercise a general control over all matters affecting the interests of the community at large."

I have been referred also to the following books—

1. **Govt. Oriental Series Class B. No. 4, book on Vishnavism and Shaivism by Bhandarkar** p. 187

and 190. 2. **Kashi Nath Shastry's Book** p. 8 and 10. 3. **Guru-vamsa Kavya from Sringeri Math** p. 109 and 110. 4. **Shiva-Tattwa Ratnakar** p. 10. 5. **Benares Gazetteer** p. 123.

The conclusion at which I arrive on a perusal of these books by authors whose independence is undoubted is that Lingayats also form an important sect of the religious order in India. Their number is large—particularly in the South. They do possess the institutions of Math, and in their case these institutions exercise a greater degree of control on the followers than other Maths. The Math in dispute is one of the five original Maths of this sect and has a high status among the Lingayats. The existence of the Math in dispute is borne out by the history as contained in these books.

I pass on now to consider the DOCUMENTARY EVIDENCE. This may be divided into the following six classes—

(i) **Ancient deeds and firmans,** being **grants** by **Emperors** from **574 A.D.** right up to the reign of **Aurangazeb** and certain proceedings taken in those days. They are 53 in number and are marked as Ex. 1 to 39 (a), 40 to 42, 55 to 61 and 72 to 74.

(ii) Deeds of Will executed by the Mahants of this Math. They are five in number and are marked as Ex. J 17 to L 17, 102 and 19. They range from 1872 to 1919.

(iii) Judgments, decrees and orders of Courts, 13 in number and summarized in paper No. 1050 (d)—2 pages.

(iv) Deeds of transfers, which are thirty-five in number and are summarized in paper No. 1049 (d)—4 pages.

(v) Books of account from 1915 to 1932—Cash Book and ledger.

(vi) Copies of plaints, written statements and other miscellaneous documents.

I shall now take up each class of the documents separtely.

## THE DEEDS OF GRANT AND FIRMANS.

The earliest documet is the **Danapatra**, by the **Raja of Kashi**. It is of Sambat **631** corresponding to **574 A.D.** A gift of an area of land on the banks of the Ganges is made to **Mallikarjuna, Gosain** of **Sri Vishwaradhya Simhasana.** It lays down that the grant is for the Gosain and members of his sect. **The deed is written on paper which is on the face of it very old—so old that it is difficult to handle it.**

It is in a frame. It is marked Ex. (1). The father of the present Maharaja renewed the deed and got its contents inscribed on a Copper plate marked Ex. (2).

The Deed is not of any great importance so far as the properties in dispute are concerned as it has been proved by evidence that the land granted was in the village of **Jangampur,** where Kardameshwar Mahadeo referred to in this Deed is situated, and this land has been acquired for the Hindu University, and the Math is no longer in its possession. Its significance lies in the fact that so far back as **574 A.D.,** this Simhasan or pontifical throne existed and received a grant from the Maharaja of Benares for the support and maintenance of of the sect.

The genuineness of this Deed has been challenged by the defendants on various grounds. First, I am referred to **Imperial Gazetteer of India,** Vol. III p. 106 (1907 edition) wherein it is said that paper was introduced into India by the Mohammedans who had learnt its use from the Chinese. As the Mohammedan invasion of India was in about 10th or 11th century, it is urged that it was impossible for any Deed in India to have been written on

paper, in the sixth century. I may in this connection invite attention to the researches of **Rai Bahadur Pandit Gauri Shanker Ojha** as contained in his book, entitled "**The Calaeography of India**", a book on which the defdts also rely as regards another point. At page 144 after referring to the records of Alexander's invasion, points out that in India paper was being made even prior to 4th century B. C. from cotton though it was not much in vogue. The defdt's contention, therefore falls to the ground. Mr. Gauri Shanker's book is more scientific and carries greater weight than the Imperial Gazetteer.

Secondly it is urged that the script of the Deed, Ex. I, is quite different from what was prevalant in the sixth century A. D. and I am referred to pages 62 and 63 and the alphabets as contained in plate XIX of Pandit Gouri Shanker's book and to Barnett's Antiquities of India p. 226 and Bhandarkar's Commemoration Volume page 309. It would appear from these references that the script in India was rather different from what we find in Ex. I.

A reference to Epigraphia Carnatica by B. Lewis Rice C. I. E., Late Directer of Public Instruction, Mysore and Coorg, (1905 Edition)

at page 53 (a) will show that the script in the Danapatra Ex. I is somewhat similar to that reproduced in this book at p. 58 (a). This is the script of about the period when the Danapatra is said to have been written.

After all, it is a matter of aboot 1400 years back and no one can exactly say as to what the script then was. This is a land with a variety of scripts and languages. No wonder therefore, if the script of the Danapatra then prevailed.

Thirdly it is urged that **Jainanda Deo** was not the ruler of Benares in **574 A. D.** How could he make a grant ?

True, history shows that about the 5th century the Raja of Kanauj had obtained mastery over Benares, but there is nothing to show that the Raja of Benares was deprlved of all his powers. What appears to have happened was that Raja of Kanauj became the suzerain power, but the Raja of Kashi continued under him. He continues upto this day.

The defendants' contentions as regards this document therefore fails. I hold that Ex. I is a genuine document and Ex. 2 is its copy on copper plate. True, about the copper plate theory, there is the evidence of the plff only,

but it stands un-rebutted and although the defdts had ample opportunity to prove that it was not genuine, yet they did not summon any one from Benares State to establish it. The presumption is in favour of genuineness.

I come now to consider the Firmans and other ancient documents. They are of the time of **Humayun, Akbar, Jehangir, Shahjehan, Aurangazeb** and **Mohammad Shah.** Nothing has been pointed out to me to raise any suspicion, about their genuineness. They are all in Persian and their translations in Urdu, done by a Vakil who was appointed as Commissioner, for this purpose, are on the record. The paper on which they are written, their language, their character, their appearance, the royal seals on most of them and the fact that some of them had been produced in courts of law as evidence, e.g. Ex. 37, 16, 12, 11 and 4 prove no doubt that they are genuine Deeds.

It is suggested that on the advent of the British rule, many persons forged Firmans to establish Mafi rights, and it is possible that the plff's predecessors might then have forged them. We cannot take the documents to be forgeries on such suggestions without any proof, particularly when in **Benares Gazetteer**

p. 123, we find a reference to these grants. It is noteworthy that these Firmans do not describe the properties granted with sufficient details to enable one to easily identify them. A forger would not forge documents which with difficulty help the person concerned. At this stage, it is not oecessary for me to refer in detail to all the Firmans. I have gone through the originals as well as the translations. Each party has given me a resume of the Firmans according to his point of view. They are papers No. 1051 and 1052 (d) on the record. It appears that **Humayun** made a grant of about three hundred bighas of land in the outskirts of Benares and Chunar (Dist. Mirzapur). From time to time in the reigns of the successive Emperors that grant was confirmed with some alterations in areas. I may invite attention to Exs. 4, 14, 19, 28, 35, 34 and 61. These Firmans establish that a congregation of jangams lived here. The grants were bestowed upon them for Madad Maash which may be translated as aid for subsistence. In this connection I may refer to 2 M. I. Appeals 390 at 419 and I.L.R. 34, Allahabad p. 468 where it was held that if property is granted for Madad Maash or the support of the

Fakirs of a particular sect, an Endowment and a Trust may be presumed. The successive Moghal Emperors regarded the Jangams as pious persons and in lieu of their piety and their praying for the prosperity of the Emperors the grants were made and continued. I may also refer to Exhs. 73 and 74 which are of 1802. They prove the assertion of title by the plaintiff's predecessors over certain properties, as regards which disputes had arisen, and recognition of title on the basis of Firmans that had been then produced before the officers.

On behalf of the defdts, I am referred to the document Ex. 72. It appears that by regulations No. 41 and 42 of 1795 everyone claiming Mafi land was called upon to produce Sanads before the District authorities by a certain date. By regulation No. 8 of 1800 that time was extended. In the year 1812, Sheoling, one of the plff's predecessors made an application that he had gone on pilgrimage and so he could not produce his Deeds earliar. He prayed that his Sanads might be copied out in the register of Mafidars. The Mutsaddi, an official, was ordered to report. He made the report and asked for further directions. The Nazir was then ordered to summon the applicant

with his Title Deeds It is argued that as the plff has not produced copies of further proceedings, it must be taken that the Sanads were disbelieved and the application was rejected. Assuming that this is the legitimate inference that may be drawn from Ex. 72, I do not think it goes to prove the non-existence of the Math. It can prove only this much, that the Mafi right was not recognized.

* * * *

The Danapatra Ex. 1 of **574 A.D.** is the earliest document and is the direct evidence of an original grant. It may be that there might have been grant of properties earlier than that, for Ex. 1 shows that the Jangams were living here even then. But we cannot positively say that. The grant Ex. 1 is of value to show only the existence of this institution so far back as 574 A. D. The property endowed by it is near Kardameshwar Mahadeo, which means Jangampur. Till the establishment of the Hindu University about twenty-two years back that land was within this Math. It passed out of its possession only when it was acquired for the University.

The Firmans and the ancient documents range from **1530 to 1748 A.D.** They prove the

following facts—By Ex. 39 (a) **Humayun** made a grant of three hundred bighas of land. This document is badly damaged and we cannot make out the whole of it. The fact that it comes from the plff's custody proves that the grant was to his predecessors. By Ex. 15 **Akbar**, referring to the old grants, confirms the grant of 480 bighas of land in Mahal Arjun Mal Jangam. It is difficult to find out to which land it refers. There is no description of it. The important thing to note in it is that there is explicit dedication in this deed of 480 bighas for Jangams. By Ex. 3 **Akbar** reduced the grant to two hundred bighas, one hundred and fity being in Benares and fifty in Chunar. The Chunar land is admittedly not in the plff's possession We do not know when it passed out of his predecessors' hands and under what circumstances. There is no description of the Benares land and it is difficult to identify it with certainty with any of the properties in dispute. Admittedly the plff is the zamindar of Mohalla Jangambari. No title deed, original or copy, is produced to trace the plff's title to this property: It may be that this zamindari may be a part of that grant. Ex. 4. also is a Firman of **Akbar's** time.

It recognizes the grant of 178 bighas of land in Pergana Haveli Benares after enquiry. It proves endowment very clearly. It relates the custom that the eldest member of the congregation becomes the Mutealli and the income is applied towards the maintenance of the Fakirs of this cult. This was verified by Qazi, Mufti, Ahali and Mowali—state officials. The next firman is Ex. 12 of the time of **Jehangir**. It shows that enquiry into possession and title of the 178 bighas in Benares was made and the grant was confirmed. Ex. 27 is a firman of **Jehangir's** reign. It reiterates the grant of 178 bighas to the Jangams for their maintenance. By Ex. 24, 100 bighas in Chunar were re-conferred upon the Jangams in **Jehangir's** reign, as it appears from Ex. 21 that Jangams had applied to the state that their number had increased and the grant to them was insufficient. Exhs. 25 and 26 also are of *Jehangir's* reign and reiterates the grants of 178 and 100 bighas in Benares and Chunar respectively. Then there are sixteen firmans of *Shahjahan's* time marked as Ex. 36, 14, 38, 5, 37, 19, 6, 28, 30, 22, 8, 18, 33, 31, 35 and 23. They recognize and reiterate the grants of the 178 and 100 bighas in Benares and Chunar.

The occasions for the frequent issue of these orders arose, because whenever there was any interference, the Jangams approached the State, and instructions were issued to the State officials to continue the grant and not to take any charges from them, or to molest them. Ex. 6 is of importance. It shows an assertion of the existence of the Math. The Firmans of *Aurangazeb's* time begin with Ex. 16 wheren he confirms the grant of the 278 bighas for the maintenace of the Jangams. Ex. 32 proves that there was a verification of the grant. Ex. 11 is also to the same effect. In Ex. 20 we find for the first time a mention of house property. It shows that one Nazir Beg had ousted the Jangams out of the premises in Benares City. They filed a complaint and then this order was issued directing the officials to enquire into the matter and on proof of the Jangams' titles, not to allow Nazir Beg to enter the premises. I noticed at the time of my local inspection that there are five courtyards in the main buillding of the Math. The reference in this may be either to this building of the Math or to five out of the several houses in this city belonging to the Math. Exhs. 1 and 10 prove that after enquiry the 5 houses

were restored to the Jangams and Rs. five hundred, realized as rent from them, was refunded. Ex. 29 is only a receipt verified before a state official acknowledging the payment of Rs. 22-8-0 by Jangams to Man Singh and others on account of certain dues. Exhs. 17, 34, 61, 56 and 59 relate to some of the properties in suit situated in the District of Allahabad. The first three are of *Akbar's* time and the last two of *Aurangazeb's* time. Ex. 39 (a) and 7 are of the time of *Jehangir* anp *Mohammad Shah* respectively and relate to the property in Gaya. They locate the property with some definiteness.

This in brief is the summary of the Firmans. They may be taken to establish that the Jangams possessed endowed properties in the Districts of Benares, Allahabad and Gaya. Whether any of the properties in suit are the same ones, it is difficult to say on account of lack of description in the Firmans. As regards the Gaya and Allahabad properties some identification can be made and it seems to me that the house in Mohalla Daraganj, Allahabad, and Mohalla Shishwarya, Gaya, are the same which are referred to in the Firmans about these Districts.

---

# ಇಂಗ್ಲಿಷ್ ಜಡ್ಜ್‌ಮೆಂಟಿನ ಅನುವಾದ



ಜೆ. ಎನ್. ಫಾರ್ಕ್ಯುಹಾರ್ ಎಂ.ಎ., ಡಿ.ಲಿಟ್. ಎಂಬವರು ತಮ್ಮ 'ರಿಲಿಜಸ್ ಕ್ವೆಸ್ಟ್ ಆಫ್ ಇಂಡಿಯಾ' ಎಂಬ ಗ್ರಂಥದಲ್ಲಿ ೨೫೯ ನೇ ಪುಟದಿಂದ ವೀರಶೈವರ ಚರಿತ್ರೆಯನ್ನು ಕೊಟ್ಟಿರುತ್ತಾರೆ. ಅವರು ಅದರಲ್ಲಿ ಪ್ರತಿಯುಗದಲ್ಲಿಯೂ ಶಿವನ ಮುಖಗಳಿಂದ ಉದ್ಭವಿಸಿದ ಏಕೋರಾಮ, ಪಂಡಿತಾರಾಧ್ಯ, ರೇವಣಾರಾಧ್ಯ, ಮರುಲಾರಾಧ್ಯ ಮತ್ತು ವಿಶ್ವಾರಾಧ್ಯ ಎಂಬ ಐದುಜನ ಯತಿಗಳಿಂದ ಈ ಮತವು ಸ್ಥಾಪಿಸಲ್ಪಟ್ಟಿತೆಂದೂ, ಇವರು ಬಹಳ ಪ್ರಾಚೀನಕಾಲದವರೆಂದೂ, ಬಸವನೆಂಬವನು ೧೨ ನೆಯ ಶತಮಾನದಲ್ಲಿ ಈ ಮತವನ್ನು ಪ್ರಚಾರ ಮಾಡಿದನೆಂದೂ ಬರೆದಿರುತ್ತಾರೆ. ಮುಂದೆ ಈ ಗ್ರಂಥಕಾರರು-- ಪಂಚಪೀಠಾಧಿಪತಿಗಳು ಪ್ರಾಯಶಃ ಬಸವನ ಸಮಕಾಲದವರೆಂದೂ, ಆದರೆ ಈ ವಿಷಯದಲ್ಲಿ ಯಾವುದನ್ನೂ ನಿರ್ಧರಿಸಿ ಹೇಳಲಾಗುವುದಿಲ್ಲ ವೆಂದೂ ಬರೆದಿರುತ್ತಾರೆ. ಅನಂತರ ಗ್ರಂಥಕಾರರು ಈ ಮತಸ್ಥಾಪನೆಯ ವಿಷಯವನ್ನು ಪ್ರಸ್ತಾಪಿಸುತ್ತ, ಈ ೫ ಜನ ಯತಿಗಳು ಮುಂದೆ ಹೇಳುವ ೫ ಮಠಗಳನ್ನು ಸ್ಥಾಪಿಸಿ ಅವುಗಳಿಗೆ ಅವರೇ ಪ್ರಥಮ ಪೀಠಾಧ್ಯಕ್ಷರಾದರೆಂದು ಬರೆದಿರುತ್ತಾರೆ :—

| ಮಠಗಳು | ಪ್ರಥಮ ಪೀಠಾಧ್ಯಕ್ಷರು |
|---|---|
| ೧. ಕೇದಾರನಾಥ (ಹಿಮಾಲಯ) | ಏಕೋರಾಮಾರಾಧ್ಯ |
| ೨. ಶ್ರೀಶೈಲ (ನಂದ್ಯಾಲದ ಸಮೀಪ) | ಪಂಡಿತಾರಾಧ್ಯ |
| ೩. ಬಾಳೇಹಳ್ಳಿ (ಮೈಸೂರಿನ ಪಶ್ಚಿಮಭಾಗ) | ರೇವಣಾರಾಧ್ಯ |
| ೪. ಉಜ್ಜಯಿನಿ (ಬಳ್ಳಾರಿ, ಮೈಸೂರು ಎಲ್ಲೆ) | ಮರುಲಾರಾಧ್ಯ |
| ೫. ಕಾಶಿ (ಬನಾರಸ್) | ವಿಶ್ವಾರಾಧ್ಯ |

ಮೈಸೂರು ಗೆಜೆಟಿಯರಿನ ೪೭೭ ನೆಯ ಪುಟದ ಮೇಲ್ಭಾಗದಲ್ಲಿ ವೀರಶೈವರು ಮಠಗಳನ್ನು ಹೊಂದಿರುತ್ತಾರೆಂದು ಹೇಳಲ್ಪಟ್ಟಿದೆ. ಮುಂಬಯಿ ಪ್ರೆಸಿಡೆನ್ಸಿ ಬಿಜಾಪುರ ಡಿ॥ ಗೆಜೆಟಿಯರಿನಲ್ಲಿಯೂ ಸಹ ವೀರಶೈವರು ಮಠಗಳನ್ನು ಹೊಂದಿರುತ್ತಾರೆಂದು ಬರೆಯಲ್ಪಟ್ಟಿದೆ. ೧೮೮೪ರಲ್ಲಿ ಅಚ್ಚಾದ ಈ ಪುಸ್ತಕದಲ್ಲಿ ೨೧೯ನೆಯ ಪುಟದಿಂದ ೨೮೦ನೆಯ ಪುಟದವರೆಗೆ ವೀರಶೈವರ ವಿಷಯವು ವಿಸ್ತಾರವಾಗಿ ಹೇಳಲ್ಪಟ್ಟಿದೆ. ೨೩೮ ನೆಯ ಪುಟದಲ್ಲಿ ೫ ಮೂಲಪೀಠಗಳ ವಿಷಯವು ಹೇಳಲ್ಪಟ್ಟಿದೆ. ಆದರೆ ಕಾಶೀಮಠದ ವಿಷಯವು ಹೇಳಲ್ಪಡದಿರುವುದು ಆಶ್ಚರ್ಯಕರ ವಾಗಿದೆಯೆಂದೂ, ೫ ನೆಯ ಪೀಠವು ಶೂನ್ಯವಾಗಿರುವುದೆಂದೂ ಹೇಳಲ್ಪಟ್ಟಿದೆ. ಪ್ರಾಯಶಃ ಅದು ಈ ಮಠದ ವಿಷಯವೇ ಇರಬಹುದು. ೧೮೮೪ ರಲ್ಲಿ ಅಚ್ಚಾದ ಸೋಲಾಪುರದ ಗೆಜೆಟಿಯರಿನ ೭೫ ನೆಯ ಪುಟದಲ್ಲಿ ವೀರಶೈವರ ವಿಷಯವು ಹೇಳಲ್ಪಟ್ಟಿದೆ. ಆದರೆ, ವೀರಶೈವರಿಗೆ ಮಠಗಳು ಇಲ್ಲವೆಂಬ ಬಗ್ಗೆ ಯಾವ ಆಧಾರವೂ ಇರುವುದಿಲ್ಲ.

ಇನ್ನು ಕಡೆಯದಾಗಿ ಥರ್ಸ್‌ಟನ್‌ರವರ 'ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ' ಎಂಬ ಗ್ರಂಥದ ವಿಷಯವನ್ನು ಪ್ರಸ್ತಾಪಿಸುತ್ತೇನೆ. ಈ ಗ್ರಂಥದ ೨೬೪ ನೆಯ ಪುಟದ ಕೆಳಭಾಗದಲ್ಲಿ ಇಂಡಿಯಾದೇಶದಲ್ಲಿರುವ ವೀರಶೈವರ ಐದು ಮುಖ್ಯಕೇಂದ್ರ (ಧರ್ಮಪೀಠ)ಗಳ ಸ್ಥಾಪನೆಯು ಹೇಳಲ್ಪಟ್ಟಿದೆ. ಅದರಲ್ಲಿ ಕಾಶೀ ವಿಶ್ವಾರಾಧ್ಯಮಠದ ವಿಷಯವು ಕೂಡ ಹೇಳಲ್ಪಟ್ಟಿದೆ. ಈ ಐದು ಕೇಂದ್ರಗಳಲ್ಲಿಯೂ "ಈ ಮಠಗಳು ಈಗಲೂ ಇರುವುವು" ಎಂದು ಅವರು ಸ್ಪಷ್ಟಪಡಿಸಿರುತ್ತಾರೆ. ಅನಂತರ ಅವರು ಈ ಮಠಾಧಿಪತಿಗಳು ವೀರಶೈವರ ಬಗ್ಗೆ ಭೂಗೋಳವನ್ನನುಸರಿಸಿ ೫ ದೊಡ್ಡಭಾಗಗಳನ್ನಾಗಿ ವಿಂಗಡಿಸಿರುವರೆಂದೂ, ಪ್ರತಿಯೊಬ್ಬ ಪೀಠಾಧಿಕಾರಿಗಳೂ ತಮ್ಮ ತಮ್ಮ ಪ್ರಾಂತದಲ್ಲಿ ಅಧಿಕಾರ ನಡೆಯಿಸುವರೆಂದೂ, ಆದರೆ ೫ ಪೀಠದವರೂ

ಸಾಮಾನ್ಯವಾಗಿ ಎಲ್ಲರ ಮೇಲೂ ಅಧಿಕಾರವನ್ನು ಹೊಂದಿರುವರೆಂದೂ, ಸಿಂಹಾಸನವೆಂದು ಕರೆಯಲ್ಪಡುವ ಪ್ರತಿಯೊಂದು ಮಠಕ್ಕೂ ಮುಖ್ಯ ಮುಖ್ಯ ಸ್ಥಳಗಳಲ್ಲಿ ಪಟ್ಟದಸ್ವಾಮಿಗಳ ನೇತೃತ್ವದಲ್ಲಿ ಶಾಖಾಮಠಗಳಿರುವು ವೆಂದೂ, ಈ ಪ್ರತಿಯೊಂದೂ ಶಾಖಾಮಠಕ್ಕೂ ಗುರುಸ್ಥಲಮಠಗಳೆಂಬ ಅನೇಕ ಉಪಶಾಖಾಮಠಗಳಿರುವವೆಂದೂ, ಈ ಉಪಶಾಖಾಮಠಗಳು ವೀರಶೈವರು ಇರುವ ಕಡೆಗಳಲ್ಲೆಲ್ಲಾ ಇರುವುವೆಂದೂ ಬರೆದಿರುವರು. ಹಬ್ಬ ಮೊದಲಾದ ವಿಶೇಷ ಸಂದರ್ಭಗಳಲ್ಲಿ ಮೇಲ್ವಿಚಾರಣೆಯನ್ನು ವಹಿಸಿ ಕಾಣಿಕೆಗಳನ್ನು ವಸೂಲುಮಾಡುವುದು, ಮತಸಂಬಂಧವಾದ ವಿಷಯುಗಳನ್ನು ಉಪದೇಶಿಸುವುದು ಮತ್ತು ಸರ್ವಸಾಮಾನ್ಯವಾಗಿ ತಮ್ಮ ಮತದ ಏಳಿಗೆಗೆ ಸಂಬಂಧಪಟ್ಟ ಎಲ್ಲ ವಿಷಯುಗಳಮೇಲೂ ಅಧಿಕಾರ ನಡೆಸು ವುದು ಇವೇ ಈ ಮಠಾಧಿಪತಿಗಳ ಕರ್ತವ್ಯಗಳಾಗಿವೆಯೆಂದೂ" ಬರೆದಿರು ವರು. ಇವಲ್ಲದೆ ಈ ಕೆಳಗಿನ ಗ್ರಂಥಗಳೂ ನನ್ನ ಅವಗಾಹನೆಗೆ ತರಲ್ಪಟ್ಟಿವೆ–

(೧) ಗೌ॥ ಓರಿಯಂಟೆಲ್ ಸೀರೀಸ್ ಬಿ. ನಂ. ೪. ಭಾಂಡಾರ ಕರ್ ಅವರ 'ವೈಷ್ಣವಿಜಂ ಅಂಡ್ ಶೈವಿಜಂ' ಪುಟ ೧೫೭ ರಿಂದ ೧೯೦ ರ ವರೆಗೆ (೨) ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳವರ ಭಾಷಣ (ಇಂಗ್ಲಿಷ್ ಭಾಷಣ) ಪುಸ್ತಕದ ಪುಟಗಳು ೨-೮ ಮತ್ತು ೧೦ (೩) ಶೃಂಗೇರಿಮಠದ ಗುರುವಂಶಕಾವ್ಯ ಪುಟ ೧೯ ಮತ್ತು ೧೧೦ (೪) ಶಿವತತ್ತ್ವರತ್ನಾಕರ ಪುಟ ೧೦ (೫) ಬನಾರಸ್ ಗೆಜೆಟಿಯರ್ ಪುಟ ೧೨೩.

ಈ ಗ್ರಂಥಕಾರರು ತಮ್ಮ ಅಭಿಪ್ರಾಯಗಳನ್ನು ನಿಷ್ಪಕ್ಷಪಾತವಾಗಿ ಬರೆ ದಿರುತ್ತಾರೆನ್ನುವದರಲ್ಲಿ ಯಾವ ಸಂಶಯವೂ ಇಲ್ಲ. ಇವರ ಈ ಗ್ರಂಥಗಳ ಪರಿಶೀಲನೆಯಿಂದ ವೀರಶೈವರು ಹಿಂದೂ ದೇಶದ ಮತಗಳಲ್ಲಿ ಶ್ರೇಷ್ಠತೆ ಯನ್ನು ಪಡೆದಿರುವರೆಂದು ನನಗೆ ಚೆನ್ನಾಗಿ ಮನದಟ್ಟಾಗಿರುವುದು. ಇವರ ಸಂಖ್ಯೆಯು ದಕ್ಷಿಣದೇಶದಲ್ಲಿ ವಿಶೇಷವಾಗಿದೆ. ಇವರು ಮಠಗಳೆಂಬ ಮತ

ಸಂಸ್ಥೆಗಳನ್ನು ಹೊಂದಿರುತ್ತಾರೆ. ಮತ್ತು ಈ ಮಠದವರು ಇತರ ಮಠಾಧಿಪತಿಗಳಿಗಿಂತಲೂ ತಮ್ಮ ಶಿಷ್ಯರ ಮೇಲೆ ಹೆಚ್ಚಿನ ಅಧಿಕಾರವನ್ನು ನಡೆಯಿಸುತ್ತಾರೆ. ಸದ್ಯಃ ವ್ಯಾಜ್ಯಕ್ಕೆ ಸಂಬಂಧಪಟ್ಟ ಮಠವು ೫ ಮೂಲ ಮಠಗಳಲ್ಲಿ ಒಂದಾಗಿರುವದಲ್ಲದೆ, ವೀರಶೈವರಲ್ಲಿ ಬಹಳ ಪ್ರಾಶಸ್ತ್ಯವನ್ನು ಪಡೆದಿರುತ್ತದೆ. ಈ ಮಠದ ಅಸ್ತಿತ್ವವು ಮೇಲಿನ ಗ್ರಂಥಗಳಲ್ಲಿ ಹೇಳಿರುವಂತೆ ಚರಿತ್ರೆಯಲ್ಲಿ ಕೂಡಿಕೊಂಡು ಬಂದಿರುತ್ತದೆ.

ಇನ್ನು ನಾನು ಕಾಗದಪತ್ರಗಳ ವಿಷಯವನ್ನು ವಿಮರ್ಶಿಸುವೆನು. ಇದನ್ನು ಈ ಮುಂದೆ ಹೇಳಿರುವಂತೆ ೬ ಭಾಗಗಳನ್ನಾಗಿ ವಿಂಗಡಿಸಬಹುದು.

(೧) ಕ್ರಿಸ್ತಶಕ ೫೭೪ ನೆಯ ವರ್ಷದಿಂದ ಔರಂಗಜೇಬನ ಆಳಿಕೆಯವರೆಗೂ ಚಕ್ರವರ್ತಿಗಳಿಂದ ಕೊಡಲ್ಪಟ್ಟ ಶಾಸನಗಳೂ ಫರ್ಮಾನ್‌ಗಳೂ ಅವೆ. ಇವುಗಳ ಒಟ್ಟು ಸಂಖ್ಯೆ ೫೩. ಎಗ್ಸಿಬಿಟ್ ೧ ರಿಂದ ೪೯ (ಎ) ೪೦ ರಿಂದ ೪೨ ರ ವರೆಗೆ, ೫೫ ರಿಂದ ೬೧ ರ ವರೆಗೆ. ಮತ್ತು ೭೨ ರಿಂದ ೭೪ ರ ವರೆಗೆ.

(೨) ಈ ಮಠದ ಮಹಾಂತರ 'ವಿಲ್' ಅಥವಾ 'ಮರಣಶಾಸನ' ಗಳು, ಇವುಗಳ ಸಂಖ್ಯೆ ಒಟ್ಟು ೫. ಎಗ್ಸಿಬಿಟ್ J. ೧೭ರಿಂದ L. ೧೭ರ ವರೆಗೆ, ೧೦೨ ಮತ್ತು ೧೯. ಇವುಗಳ ಕಾಲ ೧೪೭೨ ನೆಯ ಇಸವಿಯಿಂದ ೧೯೧೯ ರವರೆಗೆ ಇರುತ್ತದೆ.

(೩) ತೀರ್ಪುಗಳು, ಡಿಕ್ರಿಗಳು ಮತ್ತು ಕೋರ್ಟುಗಳ ಆರ್ಡರುಗಳು ಇವುಗಳ ಒಟ್ಟು ಸಂಖ್ಯೆ ೧೩. ಇವು ನಂ ೧೦೫೦ (ಡಿ) ದಾಖಲೆಯಲ್ಲಿ ೨ ಪುಟಗಳಲ್ಲಿ ಕ್ರೋಢೀಕರಿಸಲ್ಪಟ್ಟವೆ.

(೪) ವರ್ಗಪತ್ರಗಳು—ಒಟ್ಟು ಸಂಖ್ಯೆ ೩೫. ಇವು ನಂ ೧೦೪೯ (ಡಿ) ದಾಖಲೆಯಲ್ಲಿ ೪ ಪುಟಗಳಲ್ಲಿ ಕ್ರೋಢೀಕರಿಸಲ್ಪಟ್ಟವೆ.

(೫) ೧೯೧೫ ನೇ ಇಸವಿಯಿಂದ ೧೯೩೨ ನೆಯ ಇಸವಿಯ ವರೆಗಿರುವ ಲೆಖ್ಖದ ಬುಕ್ಕುಗಳು. ಕ್ಯಾಷ್‌ಬುಕ್ಕು ಮತ್ತು ಲೆಡ್ಜರು.

(೬) ಅರ್ಜಿಗಳ ಕಾಪಿಗಳು, ಹೇಳಿಕೆಗಳು ಮತ್ತು ಇತರ ದಾಖಲೆಗಳು.

ಇನ್ನು ಪ್ರತಿಯೊಂದು ದಾಖಲೆಯನ್ನೂ ಬೇರೆಬೇರೆಯಾಗಿ ವಿಮರ್ಶಿಸುತ್ತೇನೆ.

## ಶಾಸನಗಳು ಮತ್ತು ಫರ್ಮಾನ್ (ಆರ್ಡರು)ಗಳು

ಕಾಶೀರಾಜರ ದಾನಪತ್ರವು ಎಲ್ಲಕ್ಕಿಂತಲೂ ಪ್ರಾಚೀನವಾಗಿದೆ. ಇದರ ಕಾಲ ಸಂವತ್ ೬೩೧ ಅಥವಾ ಕ್ರಿ. ಶ. ೫೭೪ ಆಗಿರುವುದು. ಇದರಲ್ಲಿ ಶ್ರೀ ವಿಶ್ವಾರಾಧ್ಯ ಸಿಂಹಾಸನದ ಮಲ್ಲಿಕಾರ್ಜುನಸ್ವಾಮಿಗಳವರಿಗೆ ಗಂಗಾನದಿಯ ತೀರದಲ್ಲಿ ಸ್ವಲ್ಪ ಜಮೀನು ದಾನಮಾಡಲ್ಪಟ್ಟಿರುವುದು. ಈ ದಾನವು ಆ ಸ್ವಾಮಿಗಳಿಗಾಗಿ ಮತ್ತು ಅವರ ಅನುಯಾಯಿಗಳಿಗಾಗಿ ಎಂದು ಉಲ್ಲೇಖಿಸಲ್ಪಟ್ಟಿದೆ. ಈ ದಾನಪತ್ರದ ಕಾಗದವು ಬಹಳ ಹಳೆಯದಾಗಿದ್ದು ಅದನ್ನು ಕೈಯಿಂದ ಮುಟ್ಟುವದಕ್ಕೂ ಸಹ ಆಗದಂತಿದೆ. ಅದು ಚೌಕಟ್ಟಿನಲ್ಲಿದೆ. ಅದನ್ನು (ದಾಖಲೆ ೧) ಎಂದು ಗುರುತುಮಾಡಿದೆ. ಈಗಿನ ಕಾಶೀ ಮಹಾರಾಜರ ತಂದೆಯವರು ಈ ದಾನಪತ್ರವನ್ನು ನೂತನವಾಗಿ ತಾಮ್ರ ಪಟದ ಮೇಲೆ ಕೆತ್ತಿಸಿ ಕೊಟ್ಟಿರುತ್ತಾರೆ. (ದಾಖಲೆ ೨).

ಮೊಕದ್ದಮೆಗೆ ಸಿಕ್ಕಿರುವ ಆಸ್ತಿಗಳ ಸಂಬಂಧದಲ್ಲಿ ಈ ದಾನಪತ್ರಕ್ಕೆ ವಿಶೇಷ ಮಹತ್ವವಿರುವುದಿಲ್ಲ. ಏಕೆಂದರೆ—ಇದರಲ್ಲಿ ಕಂಡ ಭೂಮಿಯು, 'ಕರ್ದಮೇಶ್ವರ ಮಹಾದೇವ' ದೇವಾಲಯವು ಇರತಕ್ಕ ಜಂಗಮಪುರ ಗ್ರಾಮದಲ್ಲಿ ಇದ್ದಿತೆಂದು ಸಾಕ್ಷಿಗಳಿಂದ ನಿಶ್ಚಯಿಸಲ್ಪಟ್ಟಿರುತ್ತದೆ. ಈಚೆಗೆ ಈ ಭೂಮಿಯನ್ನು ಸರ್ಕಾರದವರು ವಶಪಡಿಸಿಕೊಂಡು ಹಿಂದೂವಿಶ್ವವಿದ್ಯಾಲಯದವರಿಗೆ ಕೊಟ್ಟಿರುವದರಿಂದ ಅದು ಮಠದವಶದಲ್ಲಿರುವದಿಲ್ಲ. ಆದರೆ ಕ್ರಿ. ಶ. ೫೭೪ ರಷ್ಟು ಪ್ರಾಚೀನಕಾಲದಲ್ಲಿಯೇ

ಈ ಸಿಂಹಾಸನವು ಇದ್ದಿತೆಂದೂ, ಇದರ ಪೋಷಣೆಗಾಗಿ ಕಾಶೀಮಹಾ ರಾಜರಿಂದ ಸಹಾಯವು ದೊರಕಿತ್ತೆಂದೂ ಇದರಿಂದ ವ್ಯಕ್ತವಾಗುತ್ತದೆ.

ಪ್ರತಿವಾದಿಗಳು ಈ ದಾನಪತ್ರವು ನಿಜವಾದುದಲ್ಲವೆಂದು ಅನೇಕ ಕಾರಣಗಳನ್ನು ಪ್ರತಿಪಾದಿಸಿರುತ್ತಾರೆ. ಮೊದಲನೆಯದು—೧೯೦೭ ರಲ್ಲಿ ಪ್ರಿಂಟಾಗಿರುವ 'ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ ಸಂಪುಟ ೩, ಪುಟ ೧೦೬ ರಲ್ಲಿ ಕಾಗದವು ಹಿಂದೂದೇಶಕ್ಕೆ ಮುಸಲ್ಮಾನ ರಿಂದ ತರಲ್ಪಟ್ಟಿತೆಂದೂ, ಮುಸಲ್ಮಾನರು ಅದರ ಉಪಯೋಗವನ್ನು ಚೀನಾದೇಶದವರಿಂದ ಕಲಿತಿದ್ದರೆಂದೂ ಬರೆಯಲ್ಪಟ್ಟಿದೆ. ಮಹಮ್ಮದೀ ಯರು ೧೦,೧೧ನೆಯ ಶತಮಾನಗಳಲ್ಲಿ ಹಿಂದುಸ್ಥಾನಕ್ಕೆ ಮುತ್ತಿಗೆಯನ್ನು ಹಾಕಿದುದರಿಂದ, ೬ ನೆಯ ಶತಮಾನದಲ್ಲಿ ಹಿಂದುಸ್ಥಾನದಲ್ಲಿ ಕಾಗದದ ಮೇಲೆ ದಾನಪತ್ರವನ್ನು ಬರೆಯುವುದು ಕೇವಲ ಅಸಂಭವವೆಂದು ಪ್ರತಿ ಪಾದಿಸಿರುತ್ತಾರೆ. ಆದರೆ ಈ ಸಂದರ್ಭದಲ್ಲಿ ನಾನು ರಾವ್‌ಬಹದ್ದೂರ್ ಗೌರೀಶಂಕರ ಓಝಾ ಅವರ 'ದಿ ಕ್ಯಾಲಿಯೋಗ್ರಾಫಿ ಆಫ್ ಇಂಡಿಯಾ' ಎಂಬ ಗ್ರಂಥದಲ್ಲಿರುವ ವಿಷಯವನ್ನು ಪ್ರತಿವಾದಿಗಳ ಗಮನಕ್ಕೆ ತರಲಪೇಕ್ಷಿಸುತ್ತೇನೆ. ಇದೇ ಗ್ರಂಥವನ್ನೇ ಪ್ರತಿವಾದಿಗಳು ಮತ್ತೊಂದು ವಿಷಯದ ಸಂಬಂಧದಲ್ಲಿ ದಾಖಲೆಯನ್ನಾಗಿ ತೋರಿಸಿರು ತ್ತಾರೆ. ಈ ಗ್ರಂಥದ ೧೪೪ ನೇ ಪುಟದಲ್ಲಿ ಅಲೆಗ್ಸಾಂಡರನ ಮುತ್ತಿಗೆಯ ವಿಷಯಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಕೊಟ್ಟಮೇಲೆ ಹಿಂದೂಸ್ಥಾನ ದಲ್ಲಿ ಕ್ರಿಸ್ತಪೂರ್ವ ೪ನೆಯ ಶತಮಾನಕ್ಕಿಂತಲೂ ಪೂರ್ವದಲ್ಲಿಯೇ ಅರಳೆ ಯಿಂದ ಕಾಗದವನ್ನು ತಯಾರಿಸುತ್ತಿದ್ದರೆಂದೂ, ಆದರೂ ಅದು ವಿಶೇಷ ವಾಗಿ ಪ್ರಚಾರದಲ್ಲಿರಲಿಲ್ಲವೆಂದೂ ಬರೆದಿರುತ್ತಾರೆ. ಇದರಿಂದ ಪ್ರತಿವಾದಿ ಗಳ ವಾದವು ಕುಸಿದು ಬೀಳುತ್ತದೆ. ಮಿ॥ ಗೌರೀಶಂಕರರವರ ಗ್ರಂಥವು ಶಾಸ್ತ್ರೀಯವಾಗಿರುವುದಲ್ಲದೆ, ಇಂಪೀರಿಯಲ್ ಗೆಜೆಟಿ ಯರಿಗಿಂತಲೂ ಹೆಚ್ಚು ಮಹತ್ತ್ವವುಳ್ಳುದಾಗಿದೆ.

ಎರಡನೆಯದು—ಈ ದಾನಪತ್ರದ ಅಕ್ಷರಕ್ಕೂ ೬ನೆಯ ಶತಮಾನದಲ್ಲಿ ಪ್ರಚಾರದಲ್ಲಿದ್ದ ಅಕ್ಷರಕ್ಕೂ ಸಂಪೂರ್ಣ ವ್ಯತ್ಯಾಸವಿರುವುದಾಗಿ ವಾದಿಸುತ್ತಾರೆ. ಇದಕ್ಕಾಗಿ **ಪಂಡಿತ ಗೌರೀಶಂಕರರವರ** ಗ್ರಂಥದ ೬೨ ಮತ್ತು ೬೩ ನೆಯ ಪುಟಗಳ ೧೯ ನೆಯ ಚಿತ್ರದಲ್ಲಿ ಕಂಡ ಅಕ್ಷರಗಳು, ಬಾರ್ನೆಟ್ ಅವರ "ಆಂಟಿಕ್ವಿಟೀಸ್ ಆಫ್ ಇಂಡಿಯಾ" ಎಂಬ ಗ್ರಂಥದ ೨೨೬ ನೆಯ ಪುಟ ಮತ್ತು ಭಾಂಡಾರಕರ್ ಅವರ ಗ್ರಂಥದ ೩೦೯ ನೆಯ ಪುಟ ಇವುಗಳು ದಾಖಲೆಗಳಾಗಿ ಕೊಡಲ್ಪಟ್ಟಿವೆ. ಇವುಗಳ ಪ್ರಕಾರವಾಗಿ ಹಿಂದೂಸ್ಥಾನದಲ್ಲಿ ಆ ಕಾಲದಲ್ಲಿದ್ದ ಅಕ್ಷರಗಳು ದಾನಪತ್ರದಲ್ಲಿ ಕಾಣುವ ಅಕ್ಷರಗಳಿಗೆ ಸ್ವಲ್ಪ ವ್ಯತ್ಯಾಸವಾಗಿರುವುವೆಂದು ತೋರುವದು.

ಮೈಸೂರು ಮತ್ತು ಕೊಡಗುದೇಶಗಳ ವಿದ್ಯಾಭ್ಯಾಸದ ಇಲಾಖಾ ಡೈರೆಕ್ಟರಾಗಿದ್ದ ಬಿ. ಲೂಯಿ ರೈಸ್, ಸಿ.ಐ.ಇ. ಅವರ "ಎಪಿಗ್ರಾಫಿಯಾ ಕರ್ಣಾಟಿಕಾ" (೧೯೦೫ ನೇ ವರ್ಷದ ಮುದ್ರಣ) ಎಂಬ ಗ್ರಂಥದ ೫೩ನೇ (ಎ) ಪುಟದಲ್ಲಿಯ ಅಕ್ಷರಗಳು ದಾನಪತ್ರದ (ದಾಖಲೆ ೧) ಅಕ್ಷರಗಳಂತೆಯೇ ಇರುತ್ತವೆ. ಆ ಅಕ್ಷರಗಳು ಈ ದಾನಪತ್ರವು ಬರೆಯಲ್ಪಟ್ಟ ಕಾಲದವೇ ಆಗಿರುತ್ತವೆ.

ಒಟ್ಟಿನಲ್ಲಿ ಇದು ಸುಮಾರು ೧೪೦೦ ವರ್ಷಗಳ ಹಿಂದಿನ ವಿಷಯವಾಗಿರುವುದರಿಂದ, ಆಗಿನ ಕಾಲದಲ್ಲಿ ಯಾವ ಲಿಪಿಯು ಪ್ರಚಾರದಲ್ಲಿದ್ದಿತೆಂಬುದನ್ನು ಯಾರೂ ನಿರ್ಧರಿಸಿ ಹೇಳಲಾರರು. ಈ ದೇಶವು ನಾನಾ ಲಿಪಿಗಳ ಮತ್ತು ನಾನಾಭಾಷೆಗಳ ನೆಲೆಯಾಗಿರುತ್ತದೆ. ಆದುದರಿಂದ ದಾನಪತ್ರದಲ್ಲಿ ಕಂಡ ಲಿಪಿಯು ಆಗಿನ ಕಾಲದಲ್ಲಿ ಪ್ರಚಾರದಲ್ಲಿತ್ತೆನ್ನುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಮೂರನೆಯದು— ಕ್ರಿ. ಶ. ೫೭೪ ರಲ್ಲಿ ಜಯನಂದದೇವನು ಕಾಶಿಯ ರಾಜನಾಗಿರಲಿಲ್ಲ; ಹೀಗಿರುವಲ್ಲಿ ದಾನಪತ್ರವನ್ನು ಅವನು ಹೇಗೆ ಕೊಟ್ಟನು? ಎಂದು ಪ್ರತಿವಾದಿಸಲ್ಪಟ್ಟಿದೆ.

ನಿಶ್ಚಯ! ಚರಿತ್ರೆಯಪ್ರಕಾರವಾಗಿ ೫ನೆಯ ಶತಮಾನದಲ್ಲಿ ಕನೂಜಿನ ರಾಜನು ಕಾಶಿಯ ಮೇಲೆ ಸ್ವಾಮಿತ್ವವನ್ನು ಹೊಂದಿದ್ದನು. ಆದರೆ ಕಾಶೀರಾಜರ ಅಧಿಕಾರಗಳೆಲ್ಲವೂ ಕಿತ್ತುಕೊಳ್ಳಲ್ಪಟ್ಟಿದ್ದವೆಂಬುದಕ್ಕೆ ಯಾವ ದಾಖಲೆಯೂ ಇಲ್ಲ. ಪ್ರಾಯಶಃ ಕನೂಜ್ ರಾಜರು ಶ್ರೇಷ್ಠಾಧಿಕಾರವನ್ನು ಪಡೆದಿರಬಹುದು. ಆದರೆ ಕಾಶೀರಾಜರು ಅವರ ಸಾಮಂತರಾಜರಾಗಿರಬಹುದು. ಇಂದಿನವರೆಗೂ ಅವರು ಅದೇ ರೀತಿಯಾಗಿರುತ್ತಾರೆ.

ಆದುದರಿಂದ ಈ ದಾನಪತ್ರದ ವಿಷಯದಲ್ಲಿ ಪ್ರತಿವಾದಿಗಳ ಹೇಳುವಿಕೆಯು ನಿರಾಧಾರವಾದುದು. ಆದಕಾರಣ ಈ ದಾನಪತ್ರವು (ದಾಖಲೆ ೧) ನಿಜವಾದುದೆಂದೂ, ಎರಡನೆಯ ದಾಖಲೆಯು ತಾಮ್ರಪಟದ ಮೇಲೆ ಮಾಡಿದ ಆದರ ನಕಲೆಂದೂ ನಾನು ಒಪ್ಪಿಕೊಳ್ಳುತ್ತೇನೆ. ತಾಮ್ರಶಾಸನದ ವಿಷಯದಲ್ಲಿ ವಾದಿಗಳು ಮಾತ್ರ ಸಾಕ್ಷಿಯನ್ನು ಹೇಳಿಸಿರುವುದು ನಿಶ್ಚಯ; ಆದರೆ ಆ ಸಾಕ್ಷಿಯು ಯಾರಿಂದಲೂ ವಿರೋಧಿಸಲ್ಪಟ್ಟಿಲ್ಲ. ಅದು ನಿಜವಲ್ಲವೆಂದು ರುಜುವಾತುಕೊಡಲು ಪ್ರತಿವಾದಿಗಳಿಗೆ ಬೇಕಾದಷ್ಟು ಅವಕಾಶವಿದ್ದರೂ, ಅವರು ತಮ್ಮ ಹೇಳಿಕೆಯನ್ನು ಸಮರ್ಥಿಸಲು ಕಾಶೀ ಸರಕಾರದಿಂದ ಯಾರನ್ನೂ ಕರೆಯಿಸಲಿಲ್ಲ. ಆದುದರಿಂದ ಶಾಸನವು ನಿಜವಾದದ್ದೆಂದೇ ಒಪ್ಪಿಕೊಳ್ಳಬೇಕಾಗುವುದು.

ಇನ್ನು ನಾನು ಫರ್ಮಾನುಗಳನ್ನೂ ಇತರ ಪ್ರಾಚೀನ ದಾಖಲೆಗಳನ್ನೂ ವಿಮರ್ಶಿಸುತ್ತೇನೆ. ಅವುಗಳು ಹುಮಾಯೂನ್, ಅಕ್ಬರ್, ಜಹಾಂಗೀರ್, ಷಾಜಹಾನ್, ಔರಂಗಜೇಬ್ ಮತ್ತು ಮುಹಮದ್ ಷಾ ಬಾದಶಹರ ಕಾಲದವುಗಳಾಗಿರುತ್ತವೆ. ಇವುಗಳು ನಿಜವಾದವಲ್ಲವೆಂಬ ಬಗ್ಗೆ ಪ್ರತಿವಾದಿಗಳು ಯಾವ ವಿಷಯವನ್ನೂ ನನ್ನ ಗಮನಕ್ಕೆ ತರಲಿಲ್ಲ. ಅವುಗಳೆಲ್ಲವೂ ಪರ್ಶಿಯಾಭಾಷೆಯಲ್ಲಿದ್ದು, ಕಮಿಷನರಾಗಿ ನೇಮಿಸಲ್ಪಟ್ಟಿದ್ದ ಒಬ್ಬ ವಕೀಲರಿಂದ ಉರ್ದುಭಾಷೆಗೆ ಪರಿವರ್ತಿಸಲ್ಪಟ್ಟು

ರಿಕಾರ್ಡಿನಲ್ಲಿವೆ. ಅವುಗಳನ್ನು ಬರೆದಿರುವ ಕಾಗದ, ಅವುಗಳ ಭಾಷೆ, ಅವುಗಳ ಅಕ್ಷರಗಳು, ಅವುಗಳ ಸ್ವರೂಪ, ಅವುಗಳ ಮೇಲಿರುವ ರಾಜ ಮುದ್ರೆಗಳು ಹಾಗೂ ಅವುಗಳಲ್ಲಿ ಕೆಲವು ಅಂದರೆ ೩೭, ೧೬, ೧೨, ೧೧ ಮತ್ತು ೪ ನಂಬರಿನ ದಾಖಲೆಗಳು ಅನೇಕ ಮೊಕದ್ದಮೆಗಳಲ್ಲಿ ನ್ಯಾಯಾಸ್ಥಾನಕ್ಕೆ ದಾಖಲೆಗಳಾಗಿ ಕಳುಹಿಸಲ್ಪಟ್ಟಿದ್ದವೆಂಬ ವಿಷಯವು ಅವು ನಿಜವಾದ ಶಾಸನಗಳೆಂಬುದನ್ನು ಸ್ಥಿರಪಡಿಸುತ್ತವೆ.

ಬ್ರಿಟಿಷರ ಆಳಿಕೆಯು ಪ್ರಾರಂಭವಾದಮೇಲೆ ಅನೇಕರು ' ಮಾಫಿ ' ಹುಕ್ಕುಗಳನ್ನು ಸ್ಥಾಪಿಸಿಕೊಳ್ಳುವುದಕ್ಕೋಸ್ಕರ ಕೃತಕಫರ್ಮಾನುಗಳನ್ನು ಸೃಷ್ಟಿಸಿದರೆಂದೂ, ವಾದಿಯ ಪೂರ್ವಜರೂ ಸಹ ಅದರಂತೆ ಮಾಡಿರಬಹುದೆಂದೂ ಪ್ರತಿವಾದಿಗಳು ವಾದಿಸುತ್ತಾರೆ. ವಾದಿಗಳ ಪೂರ್ವಜರು ಹಾಗೆ ಆ ಕಾಲದಲ್ಲಿ ಸೃಷ್ಟಿಮಾಡಬಹುದಾಗಿದ್ದ ಸಂಭವವೂ ಉಂಟು. ಆದರೆ ಸರಿಯಾದ ರುಜುವಾತಿಲ್ಲದ ಇಂತಹ ವಾದಗಳ ಮೇಲೆ, ಅದರಲ್ಲಿಯೂ ಬನಾರಸ್‌ಗೆಜಿಟಿಯರಿನ ೧೨೩ ನೆಯ ಪುಟದಲ್ಲಿ ಈ ದಾನಗಳ ವಿಷಯವನ್ನು ಹೇಳಿರುವಾಗ, ಈ ಫರ್ಮಾನುಗಳು ಸೃಷ್ಟಿಸಲ್ಪಟ್ಟವುಗಳೆಂದು ನಾನೆಂದೂ ಒಪ್ಪಲಾರೆನು. ಈ ಫರ್ಮಾನುಗಳಲ್ಲಿ ದಾನಮಾಡಲ್ಪಟ್ಟ ಆಸ್ತಿಗಳನ್ನು ಗುರುತಿಸಲು ಅನುಕೂಲಿಸುವಂತೆ ಸ್ಪಷ್ಟವಾಗಿ ವಿವರಿಸದಿರುವ ವಿಷಯವು ವಿಚಾರಾರ್ಹವಾಗಿದೆ. ಕಲ್ಪನೆಮಾಡುವವನು ತನಗೆ ಅನುಕೂಲವಾಗದ ಪತ್ರಗಳನ್ನು ಎಂದೂ ಸೃಷ್ಟಿಸುವದಿಲ್ಲ. ಈ ಸಮಯದಲ್ಲಿ ಎಲ್ಲ ಫರ್ಮಾನುಗಳನ್ನೂ ಆಮೂಲಾಗ್ರವಾಗಿ ವಿಮರ್ಶಿಸುವ ಅವಶ್ಯಕತೆಯೇನೂ ಇಲ್ಲ. ಮೂಲದಾಖಲೆಗಳನ್ನೂ ಅವುಗಳ ಭಾಷಾಂತರಗಳನ್ನೂ ನಾನು ನೋಡಿದ್ದೇನೆ. ಉಭಯ ಪಕ್ಷದವರೂ ಅವುಗಳ ವಿಷಯವಾಗಿ ತಮ್ಮ ತಮ್ಮ ದೃಷ್ಟಿಯಿಂದ ವಾದಮಾಡಿರುತ್ತಾರೆ. ಅವು ರಿಕಾರ್ಡಿನಲ್ಲಿ ೧೦೫೧ ಮತ್ತು ೧೦೫೨ (ಡಿ) ನಂಬರಿನವುಗಳಾಗಿವೆ. ಹುಮಾಯೂನನು ಬನಾರಸ್ ಮತ್ತು ಚುನಾರ್ (ಮಿರ್ಜಾಪುರ ಡಿ॥)

ಗಳ ಹೊರಭಾಗದಲ್ಲಿ ೩೦೦ ಬಿಘೆ ಜಮೀನನ್ನು ದಾನಮಾಡಿದನೆಂದು ತೋರುವುದು. ಮುಂದೆ ಆಳಿದ ಚಕ್ರವರ್ತಿಗಳ ಕಾಲದಲ್ಲಿ ಆಗಿಂದಾಗ್ಗೆ ಈ ದಾನವು ಅಲ್ಪಸ್ವಲ್ಪ ವ್ಯತ್ಯಾಸಮಾಡಿ ಸ್ಥಿರಪಡಿಸಲ್ಪಟ್ಟಿದೆ. ಇವುಗಳು ೪, ೧೪, ೧೯, ೨೮, ೩೪, ೩೫, ಮತ್ತು ೬೧ನೇ ದಾಖಲೆಗಳಾಗಿರುತ್ತವೆ. ಈ ಫರ್ಮಾನುಗಳು ಇಲ್ಲಿ ಒಂದು ಜಂಗಮರ ಗುಂಪು ವಾಸವಾಗಿತ್ತೆಂಬುದನ್ನು ಸ್ಥಿರಪಡಿಸುತ್ತವೆ. ಈ ದಾನಗಳು ಅವರಿಗೆ 'ಮದದ್ ಮಾಷ' ಅಥವಾ ಪೋಷಣೆಗಾಗಿ ಕೊಡಲ್ಪಡುತ್ತಿದ್ದವು. ಇದೇ ಸಂದರ್ಭದಲ್ಲಿ ಅಲಹಾಬಾದಿನ ೩೯೦ ಮತ್ತು ೪೮೧ ನೆಯ ನಂಬರು ಅಪೀಲ್ ಮೊಕದ್ದಮೆಗಳಲ್ಲಿ ಯಾವುದಾದರೊಂದು ಗೊತ್ತಾದ ಮತದ ಫಕೀರರಿಗೆ 'ಮದದ್‌ಮಾಷ' ಅಥವಾ ಪೋಷಣೆಗಾಗಿ ಆಸ್ತಿಯನ್ನು ಕೊಟ್ಟರೆ ಅದನ್ನು 'ದಾನ' ಅಥವಾ 'ಟ್ರಸ್ಟ್' ಎಂದು ಭಾವಿಸಬೇಕೆಂಬುದಾಗಿ ತೀರ್ಪು ಹೇಳಲ್ಪಟ್ಟಿದೆ. ಅಧಿಕಾರಕ್ಕೆ ಬಂದ ಮೊಗಲ್ ಚಕ್ರವರ್ತಿಗಳೆಲ್ಲರೂ ಈ ಜಂಗಮರನ್ನು ಸಾಧುಗಳೆಂದು ಭಾವಿಸಿ, ಅವರ ಸಾಧುತ್ವಕ್ಕೂ ಮತ್ತು ಚಕ್ರವರ್ತಿಗಳ ಶ್ರೇಯೋಭಿವೃದ್ಧಿಗಾಗಿ ಅವರು ಮಾಡುತ್ತಿದ್ದ ಪ್ರಾರ್ಥನೆಗೂ ಈ ದಾನಗಳನ್ನು ಕೊಟ್ಟು ನಡೆಯಿಸಿಕೊಂಡು ಬರುತ್ತಿದ್ದರು. ೧೮೮೨ ನೆಯ ವರ್ಷದ ೭೩ ಮತ್ತು ೭೪ ನೆಯ ನಂಬರ್ ದಾಖಲೆಗಳೂ ವಿಚಾರಯೋಗ್ಯವಾಗಿವೆ. ವಾದಿಯ ಪೂರ್ವಜರು ವ್ಯಾಜ್ಯ ಹುಟ್ಟಿದ್ದ ಕೆಲವು ಆಸ್ತಿಗಳ ವಿಷಯದಲ್ಲಿ, ಈ ಫರ್ಮಾನುಗಳನ್ನು ನ್ಯಾಯಾಸ್ಥಾನಕ್ಕೆ ಹಾಜರ್ಮಾಡಿ ಇವುಗಳ ಆಧಾರದ ಮೇಲೆ ತಮ್ಮ ಹಕ್ಕನ್ನು ಸ್ಥಿರಪಡಿಸಿಕೊಂಡರೆಂಬುದನ್ನು ವ್ಯಕ್ತಗೊಳಿಸುತ್ತವೆ.

ಪ್ರತಿವಾದಿಗಳಿಂದ ೭೨ ನೆಯ ದಾಖಲೆಯು ಟೀಕಿಸಲ್ಪಟ್ಟಿದೆ. ೧೮೭೫ ನೇ ಇಸವಿಯ ೪೧ ಮತ್ತು ೪೨ ನೆಯ ಕಾನೂನುಗಳಿಂದ ಸರಕಾರದವರು, ಮಾಫಿ ಜಮೀನುಗಳ ಹಕ್ಕುಗಳನ್ನು ಹೊಂದಿರುವವರು ಒಂದು ಗೊತ್ತಾದ ತಾರೀಖಿನೊಳಗಾಗಿ ತಮ್ಮ ಸನ್ನದುಗಳನ್ನು

ಡಿಸ್ಟ್ರಿಕ್ಟ್ ಅಧಿಕಾರಿಗಳ ಮುಂದೆ ಹಾಜರ್ಮಾಡಬೇಕಾಗಿ ಅಪ್ಪಣೆ ಮಾಡಿದ ರೆಂದು ಗೊತ್ತಾಗುತ್ತದೆ. ೧೮೦೦ ನೆಯ ಇಸವಿಯ ೮ ನೇ ಕಾನೂನಿನಿಂದ ಈ ಅವಧಿಯು ಹೆಚ್ಚಿಸಲ್ಪಟ್ಟಿತು. ೧೮೧೨ ನೆಯ ವರ್ಷದಲ್ಲಿ ವಾದಿಯ ಪೂರ್ವಜರಲ್ಲೊಬ್ಬರಾದ ಶಿವಲಿಂಗಸ್ವಾಮಿಗಳು ತಾವು ಯಾತ್ರಾರ್ಥಿಗಳಾಗಿ ಹೋಗಿದ್ದುದರಿಂದ ತಮ್ಮ ಪತ್ರಗಳನ್ನು ಮುಂಚಿತವಾಗಿ ಹಾಜರ್ಮಾಡ ಲಿಲ್ಲವೆಂದು ಅರ್ಜಿಯನ್ನು ಹಾಕಿದರು. ತಮ್ಮ ಸನ್ನದುಗಳನ್ನು ಪರಾ ಮರ್ಶಿಸಿ ಮಾಫೀದಾರರ ರೆಜಿಸ್ಟರಿನಲ್ಲಿ ದಾಖಲ್ಮಾಡಬೇಕೆಂದು ಪ್ರಾರ್ಥಿ ಸಿದರು. ಅಧಿಕಾರಿಗಳು ಇದನ್ನು ವಿಚಾರಮಾಡಿ ರಿಪೋರ್ಟು ಮಾಡ ಬೇಕೆಂದು ಒಬ್ಬ ಮುತ್ಸದ್ದಿಗೆ ಅಪ್ಪಣೆಮಾಡಿದರು. ಅವನು ಅದರಂತೆ ರಿಪೋರ್ಟನ್ನು ಒಪ್ಪಿಸಿ ತೀರ್ಮಾನವನ್ನು ಕೇಳಿದ್ದನು. ಅನಂತರ ಅಧಿ ಕಾರಿಗಳು ದಾಖಲೆಗಳ ಸಮೇತ ಅರ್ಜಿದಾರರನ್ನು ಹಾಜರ್ಮಾಡುವಂತೆ ನಾಜಿರರಿಗೆ ಅಪ್ಪಣೆಮಾಡಿದರು. ಇದರ ವಿಷಯವಾಗಿ ವಾದಿಯು ಮುಂದಿನ ನಡವಳಿಕೆಗಳನ್ನು ಹಾಜರ್ಮಾಡಲಿಲ್ಲವಾದುದರಿಂದ ಸರಕಾರ ದವರು ಸನ್ನದುಗಳನ್ನು ಸುಳ್ಳೆಂದು ಭಾವಿಸಿ, ಅಪ್ಲಿಕೇಷನ್ನನ್ನು ವಜಾ ಮಾಡಿದರೆಂದು ಪ್ರತಿವಾದಿಗಳು ವಾದಿಸುತ್ತಾರೆ. ೭೨ ನೆಯ ನಂಬರು ದಾಖಲೆಯಿಂದ ನಿಜವಾಗಿಯೂ ಇದೇ ಅರ್ಥವಾಗುವುದೆಂದು ಭಾವಿಸಿ ದರೂ, ಅದರಿಂದ ಮಠದ ಇರುವಿಕೆಯೇನೂ ಸುಳ್ಳಾಗಲಾರದು. ಅದರಿಂದ ಮಠದ ಇರುವಿಕೆಯೇನೂ ಸುಳ್ಳಾಗಲಾರದು. ಅದರಿಂದ ಮಾಫೀಹಕ್ಕು ಸ್ಥಿರಪಡಲಿಲ್ಲವೆಂದು ಮಾತ್ರ ವ್ಯಕ್ತವಾಗುವುದು.

* * * *

ಕ್ರಿಸ್ತಶಕ ೫೭೪ ನೆಯ ವರ್ಷದ (ದಾಖಲೆ ನಂ. ೧) ದಾನ ಪತ್ರವು ಅತ್ಯಂತ ಪ್ರಾಚೀನವಾದ ದಾಖಲೆಯಾಗಿ ಮೂಲದಾನದ ಪ್ರತ್ಯಕ್ಷ ನಿದರ್ಶನವಾಗಿರುತ್ತದೆ. ಇದಕ್ಕಿಂತಲೂ ಪೂರ್ವದಲ್ಲಿ ಅನೇಕ ದಾನಗಳು ಕೊಡಲ್ಪಟ್ಟಿರಬಹುದು. ಏಕೆಂದರೆ—ದಾಖಲೆ ನಂ. ೧ ರಲ್ಲಿ ಆಗಲೂ ಇಲ್ಲಿ

ಜಂಗಮರು ವಾಸಿಸುತ್ತಿದ್ದರೆಂದು ಹೇಳಲ್ಪಟ್ಟದೆ. ಆದರೂ ಇದನ್ನು ನಿಶ್ಚಯವಾಗಿ ಹೀಗೆಯೇ ಎಂದು ಹೇಳಲಿಕ್ಕಾಗುವುದಿಲ್ಲ. ೧ ನೇ ನಂ. ದಾಖಲೆಯು ಕ್ರಿಸ್ತಶಕ ೫೭೪ ರಲ್ಲಿ ಈ ಸಂಸ್ಥೆಯು ಇತ್ತೆಂಬುದನ್ನು ಮಾತ್ರ ಸ್ಥಿರಪಡಿಸುತ್ತದೆ. ಈ ದಾನಪತ್ರದಲ್ಲಿ ಕಂಡ ಜಮೀನು ಕರ್ದ ಮೇಶ್ವರಮಹಾದೇವ ಅಥವಾ ಜಂಗಮಪುರದ ಸಮೀಪದಲ್ಲಿದೆ. ೨೨ ವರ್ಷಗಳ ಹಿಂದೆ ಹಿಂದೂವಿಶ್ವವಿದ್ಯಾನಿಲಯವು ಕಟ್ಟಲ್ಪಡುವವರೆಗೆ ಈ ಜಮೀನು ಮಠದವರದಾಗಿಯೇ ಇತ್ತು. ವಿಶ್ವವಿದ್ಯಾನಿಲಯಕ್ಕೆ ತೆಗೆದು ಕೊಂಡಂದಿನಿಂದ ಇದು ಅವರ ಕೈತಪ್ಪಿತು.

ಈ ಫರ್ಮಾನುಗಳು ಮತ್ತು ಪ್ರಾಚೀನ ದಾಖಲೆಗಳು ೧೫೩೦ ನೆಯ ವರ್ಷದಿಂದ ೧೭೪೮ ರ ವರೆಗೆ ಇರುತ್ತವೆ. ಇವುಗಳಿಂದ ಈ ಕೆಳ ಗಿನ ವಿಷಯಗಳು ಸ್ಥಿರಪಡುತ್ತವೆ. ೩೯ ನೆಯ ನಂ. (ಎ) ಶಾಸನಾನು ಸಾರವಾಗಿ ಹುಮಾಯೂನನು ೩೦೦ ಬಿಘೆ ಜಮೀನನ್ನು ದಾನಮಾಡಿ ದನು. ಈ ದಾಖಲೆಯು ಬಹಳ ಶಿಥಿಲವಾಗಿದೆ. ಇದನ್ನು ಪೂರ್ಣವಾಗಿ ಓದಿ ತಿಳಿಯುವಂತಿಲ್ಲ. ಇದು ವಾದಿಗಳ ವಶದಲ್ಲಿರುವದರಿಂದ, ದಾನವು ವಾದಿಗಳ ಪೂರ್ವಜರಿಗೆ ಮಾಡಲ್ಪಟ್ಟದೆಯೆಂದು ಗೊತ್ತಾಗುವುದು. ೧೫ ನೇ ನಂಬರು ದಾಖಲೆಯಲ್ಲಿ ಅಕ್ಬರನು ಹಿಂದಿನ ದಾನಗಳನ್ನು ಪ್ರಸ್ತಾಪಿಸಿ ಮಹಾಂತ ಮಲ್ಲಿಕಾರ್ಜುನ ಜಂಗಮರಲ್ಲಿರುವ ४೮೦ ಬಿಘೆ ಜಮೀನಿನ ದಾನವನ್ನು ಸ್ಥಿರಗೊಳಿಸಿರುತ್ತಾನೆ. ಈ ಜಮೀನು ಯಾವು ದೆಂಬುದನ್ನು ನಿರ್ಧರಿಸುವುದು ಕಷ್ಟವಾಗಿದೆ. ಅದು ಸ್ಪಷ್ಟವಾಗಿ ವಿವರಿಸ ಲ್ಪಟ್ಟಿಲ್ಲ. ಆದರೆ ಅದರಲ್ಲಿ ಜಂಗಮರಿಗಾಗಿ ४೮೦ ಬಿಘೆ ಜಮೀನು ಕೊಡಲ್ಪಟ್ಟಿರುವುದೆಂದು ಸ್ಪಷ್ಟಪಡಿಸಲ್ಪಟ್ಟಿರುವುದು. ೩ ನೆಯ ನಂಬರು ದಾಖಲೆಯಲ್ಲಿ ಅಕ್ಬರನು ಈ ದಾನವನ್ನು ೨೦೦ ಬಿಘೆಗಳಿಗೆ ಕಡಿಮೆ ಮಾಡಿರುತ್ತಾನೆ. ಅದರಲ್ಲಿ ಕಾಶಿಯಲ್ಲಿ ೧೫೦ ಮತ್ತು ಚುನಾರಿನಲ್ಲಿ ೫೦ ಬಿಘೆ ಗಳು ಇರುತ್ತವೆ. ಚುನಾರ್ ಜಮೀನು ತಮ್ಮ ವಶದಲ್ಲಿಲ್ಲವೆಂದು ವಾದಿ

ಗಳು ಒಪ್ಪಿಕೊಂಡಿರುತ್ತಾರೆ. ಅದು ಯಾರ ಕಾಲದಲ್ಲಿ ಹೇಗೆ ಇವರ ಕೈಬಿಟ್ಟುಹೋಯಿತೆಂಬುದು ನಮಗೆ ಗೊತ್ತಿಲ್ಲ. ಕಾಶಿಯ ಜಮೀನುಗಳು ಸರಿಯಾಗಿ ವಿವರಿಸಲ್ಪಟ್ಟಿಲ್ಲ. ಮತ್ತು ಈಗ ವ್ಯವಹಾರಕ್ಕೆ ಸಿಕ್ಕಿರುವ ಜಮೀನುಗಳಲ್ಲಿ ಅವು ಇಂಥವೆಂದು ನಿರ್ಧರಿಸಿ ಹೇಳುವುದೂ ಕೂಡ ಕಷ್ಟವಾಗಿದೆ. ಅಂತೂ ವಾದಿಗಳು ಜಂಗಮವಾಡೀ ಮೊಹಲ್ಲಾ ಜಮೀನ್ ದಾರರಾಗಿರುವುದಾಗಿ ಹೇಳಿರುತ್ತಾರೆ. ಇದಕ್ಕೆ ವಾದಿಗಳ ಹಕ್ಕನ್ನು ಗೊತ್ತುಪಡಿಸುವ ಯಾವ ದಾಖಲೆಯೂ ಹಾಜರ್ಮಾಡಲ್ಪಟ್ಟಿಲ್ಲ. ಪ್ರಾಯಶಃ ಈ ಜಮೀನ್‌ದಾರಿಯು ಆ ದಾನದ ಒಂದು ಭಾಗವಾಗಿರ ಬಹುದು. ೪ ನೆಯ ನಂಬರು ದಾಖಲೆಯೂ ಸಹ ಅಕ್ಬರನ ಕಾಲದ ಫರ್ಮಾನೇ ಆಗಿರುತ್ತದೆ. ಅದು ಪರಗಣ ಹವೇಲಿ ಬನಾರಸ್ಸಿನಲ್ಲಿರುವ ೧೭೮ ಬಿಘೆ ಜಮೀನಿನ ದಾನವನ್ನು ಅಂಗೀಕರಿಸುತ್ತದೆ. ಇದರಿಂದ ದಾನವೆಂಬುದು ಸ್ಪಷ್ಟಪಡುತ್ತದೆ. ಇದರಲ್ಲಿ ಧರ್ಮಸಂಸ್ಥೆಯ ಹಿರಿಯ ಮೆಂಬರು "ಮುತವಲ್ಲಿ" ಟ್ರಸ್ಟಿಯಾಗುವನೆಂದೂ, ಉತ್ಪತ್ತಿಯು ಆ ಮತಾನುಯಾಯಿಗಳಾದ ಸ್ವಾಮಿಗಳ ಪೋಷಣೆಗೆ ಉಪಯೋಗಿಸ ಲ್ಪಡುವುದೆಂದೂ ಹೇಳಲ್ಪಟ್ಟಿದೆ. ಇದು ಖಾಜಿ, ಮುಫ್ತಿ, ಆಹಲಿ ಮತ್ತು ಮೌಲ್ವಿ ಈ ಅಧಿಕಾರಿಗಳಿಂದ ಪರಿಶೀಲಿಸಲ್ಪಟ್ಟಿದೆ. ಮುಂದಿನ ಫರ್ಮಾನ್ (ದಾಖಲೆ ನಂ. ೧೨) ಜಹಾಂಗೀರನ ಕಾಲದ್ದಾಗಿದೆ. ಇದರಿಂದ ಕಾಶಿ ಯಲ್ಲಿಯ ೧೭೮ ಬಿಘೆ ಜಮೀನುಗಳ ಹಕ್ಕುಬಾಧ್ಯತೆಗಳ ವಿಷಯವು ವಿಚಾರಿಸಲ್ಪಟ್ಟು ದಾನವು ಸ್ಥಿರಪಡಿಸಲ್ಪಟ್ಟಿತೆಂಬುದು ವ್ಯಕ್ತವಾಗುತ್ತದೆ. ೨೭ ನೆಯ ನಂಬರು ದಾಖಲೆಯು ಜಹಾಂಗೀರನ ಕಾಲದ್ದಾಗಿದೆ. ಇದೂ ಕೂಡ ಜಂಗಮರ ಪೋಷಣೆಗಾಗಿ ಕೊಡಲ್ಪಟ್ಟ ೧೭೮ ಬಿಘೆ ಜಮೀನು ಗಳನ್ನು ಸ್ಥಿರಪಡಿಸುತ್ತದೆ. ೨೧ ನೆಯ ನಂಬರು ದಾಖಲೆಯಲ್ಲಿ ಕಂಡಂತೆ ಜಂಗಮರು ತಮ್ಮ ಸಂಖ್ಯೆಯು ಹೆಚ್ಚಾಗಿರುವುದೆಂದೂ, ತಮಗೆ ದೊರೆ ತಿರುವ ಸಹಾಯವು ಸಾಲದೆಂದೂ ಸರಕಾರಕ್ಕೆ ವಿಜ್ಞಾಪಿಸಿಕೊಂಡದ್ದರಿಂದ,

ಜಹಾಂಗೀರನ ಕಾಲದಲ್ಲಿ ಜಂಗಮರಿಗೆ ಪುನಃ ಚುನಾರಿನಲ್ಲಿ ೧೦೦ ಬಿಘೆ ಜಮಿಾನು ಕೊಡಲ್ಪಟ್ಟಿತೆಂಬುದು ೨೪ ನೆಯ ನಂಬರು ದಾಖಲೆಯಿಂದ ವ್ಯಕ್ತವಾಗುತ್ತದೆ. ೨೫ ಮತ್ತು ೨೬ ನೆಯ ನಂಬರು ದಾಖಲೆಗಳೂ ಜಹಾಂಗೀರನ ಕಾಲದವೇ ಆಗಿರುತ್ತವೆ. ಇವು ಕಾಶೀ ಮತ್ತು ಚುನಾರಿನಲ್ಲಿಯ ೧೭೮ ಮತ್ತು ೧೦೦ ಬಿಘೆ ಜಮಿಾನುಗಳ ದಾನವನ್ನು ಪುನಃ ಸ್ಥಿರಪಡಿಸುತ್ತವೆ. ಅನಂತರ ಷಾಜಹಾನ್ ಕಾಲದ ೩೬, ೧೪, ೩೮, ೫, ೩೭, ೧೯, ೬, ೨೮, ೩೦, ೨೨, ೮, ೧೮, ೩೩, ೩೧, ೩೫ ಮತ್ತು ೨೩ ನಂಬರಿನ ೧೬ ಫರ್ಮಾನುಗಳಿವೆ. ಇವು ಬನಾರಸ್ ಮತ್ತು ಚುನಾರಿನಲ್ಲಿಯ ೧೭೮ ಮತ್ತು ೧೦೦ ಬಿಘೆ ಜಮಿಾನುಗಳ ದಾನವನ್ನು ಸ್ಥಿರಪಡಿಸುತ್ತವೆ. ಜಂಗಮರಿಗೆ ಏನಾದರೂ ತೊಂದರೆಯು ಪ್ರಾಪ್ತವಾದ ಕೂಡಲೆ, ಅವರು ಚಕ್ರವರ್ತಿಗಳಲ್ಲಿ ವಿಜ್ಞಾಪಿಸಿಕೊಳ್ಳುತ್ತಿದ್ದರು. ಇದರ ಮೇಲೆ ಜಂಗಮರಿಗೆ ಕೊಡಬೇಕಾದುದನ್ನು ಮುಂದೆಯೂ ಕೊಡಬೇಕೆಂದೂ, ಅವರಿಂದ ಯಾವ ತೆರಿಗೆಯನ್ನೂ ವಸೂಲು ಮಾಡಕೂಡದೆಂದೂ, ಅವರನ್ನು ತೊಂದರೆಪಡಿಸಕೂಡದೆಂದೂ ಕೆಳಗಿನ ನೌಕರರಿಗೆ ಅಪ್ಪಣೆಯಾಗುತ್ತಿತ್ತು. ಪದೇ ಪದೇ ಫರ್ಮಾನುಗಳು ಹೊರಡುವುದಕ್ಕೆ ಇದೇ ಕಾರಣವಾಗಿದೆ. ೬ ನೆಯ ನಂಬರು ದಾಖಲೆಯೂ ಮುಖ್ಯವಾದುದು. ಅದು ಮಠದ ಇರುವಿಕೆಯನ್ನು ಸ್ಥಿರಗೊಳಿಸುತ್ತದೆ. ಔರಂಗಜೇಬನ ಕಾಲದ ಫರ್ಮಾನುಗಳು ೧೬ ನೆಯ ನಂಬರ್ ದಾಖಲೆಯಿಂದ ಪ್ರಾರಂಭವಾಗುತ್ತವೆ. ಅದರಲ್ಲಿ ಜಂಗಮರಿಗೆ ಕೊಡಲ್ಪಟ್ಟಿದ್ದ ೨೭೮ ಬಿಘೆ ಜಮಿಾನುಗಳ ದಾನವು ಸ್ಥಿರಪಡಿಸಲ್ಪಟ್ಟಿರುತ್ತದೆ. ೩೨ ನೆಯ ನಂಬರ್ ದಾಖಲೆಯಿಂದ ಈ ದಾನವು ಪುನರ್ವಿಮರ್ಶಿಲ್ಪಟ್ಟಿತೆಂದು ಗೊತ್ತಾಗುತ್ತದೆ. ೧೧ ನೆಯ ನಂಬರು ದಾಖಲೆಯಲ್ಲಿಯೂ ಇದೇ ವಿಷಯವಿರುತ್ತದೆ. ೨೦ ನೆಯ ನಂಬರ್ ದಾಖಲೆಯಲ್ಲಿ ಒಂದು ಮನೆಯ ವಿಷಯವಿದೆ. ಅದರಲ್ಲಿ ನಾಜಿರ್ ಬೇಗ್

ಎಂಬವನು ಬನಾರಸ್ ಸಿಟಿಯಲ್ಲಿ ಜಂಗಮರನ್ನು ಮನೆಯಿಂದ ಹೊರಕ್ಕೆ ಕಳುಹಿಸಿದನೆಂದು ಬರೆಯಲ್ಪಟ್ಟಿದೆ. ಜಂಗಮರು ಫಿರ್ಯಾದುಮಾಡಿದರು. ಆಗ ಈ ವಿಷಯುವನ್ನು ವಿಚಾರಮಾಡಿ, ಜಂಗಮರ ಹಕ್ಕುಬಾಧ್ಯತೆಗಳು ರುಜುವಾತಾದರೆ, ನಾಜಿರ್‌ಬೇಗನು ಮನೆಯುನ್ನು ಪ್ರವೇಶಮಾಡದಂತೆ ಮಾಡಬೇಕೆಂದು ಅಧಿಕಾರಿಗಳಿಗೆ ಅಪ್ಪಣೆಯಾಯಿತು.

ನಾನು ಸ್ವತಃ ಪರೀಕ್ಷಿಸಿದಾಗ ಮಠದ ಮುಖ್ಯ ಕಟ್ಟಡಕ್ಕೆ ೫ ಅಂಗಳಗಳಿದ್ದುದನ್ನು ನೋಡಿರುವೆನು. ಈ ದಾಖಲೆಯಲ್ಲಿ ಕಂಡ ವಿಷಯವು ಮಠದ ಈ ಕಟ್ಟಡಕ್ಕಾಗಲಿ ಅಥವಾ ಸಿಟಿಯಲ್ಲಿ ಮಠಕ್ಕೆ ಸೇರಿರುವ ಬೇರೆ ೫ ಮನೆಗಳಿಗಾಗಲಿ ಸಂಬಂಧಿಸಿರಬಹುದು. ೧ ಮತ್ತು ೧೦ ನೆಯ ನಂಬರ್ ದಾಖಲೆಗಳಿಂದ ಆ ೫ ಮನೆಗಳು, ವಿಚಾರಣೆಯಾದ ಮೇಲೆ ಹಿಂತಿರುಗಿ ಜಂಗಮರಿಗೆ ಕೊಡಲ್ಪಟ್ಟವೆಂದೂ, ಅವುಗಳಿಂದ ವಸೂಲಾಗಿದ್ದ ೫೦೦ ರೂ. ಭಾಡಿಗೆ ಹಣವು ಹಿಂತಿರುಗಿ ಕೊಡಲ್ಪಟ್ಟಿತೆಂದೂ ತಿಳಿದುಬರುತ್ತದೆ. ೨೯ ನೆಯ ನಂಬರ್ ದಾಖಲೆಯು, ಜಂಗಮರು ಮಾನಸಿಂಗ್ ಮೊದಲಾದವರಿಗೆ ಯಾವುದೋ ಬಾಕಿಗಾಗಿ ೨೨-೮-೦ ರೂ. ಗಳನ್ನು ಪಾವತಿಮಾಡಿದ ಬಗ್ಗೆ ಸರಕಾರೀ ಅಧಿಕಾರಿಯಿಂದ ರುಜುಮಾಡಲ್ಪಟ್ಟ ರಶೀತಿಯಾಗಿದೆ. ೧೭, ೩೪, ೬೧, ೫೭ ಮತ್ತು ೫೯ ನೆಯ ನಂಬರಿನ ದಾಖಲೆಗಳು ಅಲಹಾಬಾದ್ ಡಿಸ್ಟ್ರಿಕ್ಟಿನಲ್ಲಿರುವ ಮೊಕದ್ದಮೆಗೆ ಸಂಬಂಧಪಟ್ಟ ಕೆಲವು ಆಸ್ತಿಗಳಿಗೆ ಸಂಬಂಧಿಸಿರುತ್ತವೆ. ಮೊದಲನೆಯ ಮೂರು ಅಕ್ಬರನ ಕಾಲದವುಗಳೂ, ಕಡೆಯ ಎರಡು ಔರಂಗಜೇಬನ ಕಾಲದವುಗಳೂ ಆಗಿರುತ್ತವೆ. ೩೯ (ಎ) ಮತ್ತು ೭ ನೆಯ ನಂಬರ್ ದಾಖಲೆಗಳು ಜಹಂಗೀರ್ ಮತ್ತು ಮಹಮುದ್ ಷಾಹನ ಕಾಲದವುಗಳಾಗಿದ್ದು ಗಯೆಯಲ್ಲಿರುವ ಆಸ್ತಿಗೆ ಸಂಬಂಧಪಟ್ಟಿರುತ್ತವೆ. ಆಸ್ತಿಯು ಇಂಥದೇ ಎಂಬುದನ್ನು ಅವು ತಕ್ಕಮಟ್ಟಿಗೆ ವಿಶದಮಾಡುತ್ತವೆ. ಇದು ಫರ್ಮಾನುಗಳ ಸಂಕ್ಷಿಪ್ತ ಚರಿತ್ರೆಯಾಗಿರುತ್ತದೆ.

ಇವುಗಳಿಂದ ಜಂಗಮರು ಬನಾರಸ್, ಅಲಹಾಬಾದ್ ಮತ್ತು ಗಯಾ ಡಿಸ್ಟ್ರಿಕ್ಟ್‌ಗಳಲ್ಲಿ ದಾನರೂಪವಾಗಿ ಆಸ್ತಿಗಳನ್ನು ಹೊಂದಿದ್ದರೆಂದು ಸ್ಥಿರವಾಗುವುದು. ವ್ಯವಹಾರಕ್ಕೆ ಸಂಬಂಧಪಟ್ಟ ಆಸ್ತಿಗಳು ಇಂತಹವೇ ಎಂಬುದು ಫರ್ಮಾನುಗಳಲ್ಲಿ ವಿವರಿಸಲ್ಪಡದಿರುವದರಿಂದ, ಅವುಗಳನ್ನು ಸರಿಯಾಗಿ ನಿರ್ಧರಿಸಲಾಗುವದಿಲ್ಲ. ಗಯಾ ಮತ್ತು ಅಲಹಾಬಾದ ದಲ್ಲಿರುವ ಆಸ್ತಿಗಳನ್ನು ತಕ್ಕಮಟ್ಟಿಗೆ ಗುರುತಿಸಬಹುದು. ಅಲಹಾಬಾದಿನ ದಾರಾಗಂಜ ಮೊಹಲ್ಲಾದಲ್ಲಿರುವ ಮಂದಿರವೂ, ಗಯೆಯ ಶಿಸೋರಿಯಾ ಮೊಹಲ್ಲಾದಲ್ಲಿರುವ ಮಂದಿರವೂ ಆ ಡಿಸ್ಟ್ರಿಕ್ಟ್‌ಗಳಿಗೆ ಸಂಬಂಧಪಟ್ಟಿರುವ ಫರ್ಮಾನ್‌ಗಳಲ್ಲಿ ಕಂಡ ಮಂದಿರಗಳೇ ಆಗಿರುವುವೆಂದು ನನಗೆ ತೋರು ತ್ತದೆ.



# ಶ್ರೀಜಗದ್ಗುರು ಕಾಶೀಪೀಠದ ಬಗ್ಗೆ ಅಲಹಾಬಾದ ಹೈಕೋರ್ಟಿನ ತೀರ್ಮಾನ



ಇದರಲ್ಲಿ ಉದಾಹರಿಸಿರುವ ಶ್ರೀಜಗದ್ಗುರು ಕಾಶೀಪೀಠದ ವ್ಯಾಜ್ಯದ ಬಗ್ಗೆ ಆದ ತೀರ್ಮಾನದ ಮೇಲೆ ೧೯೩೪ ನೆಯ ಇಸ್ವಿಯಲ್ಲಿ ಅಲಹಾಬಾದ ಹೈಕೋರ್ಟಿನಲ್ಲಿ ಅಪೀಲು ಮಾಡಲ್ಪಟ್ಟಿತು.

Case No. 58 of 1934.   Appeal No. 161 of 1934.

ಅಲಹಾಬಾದ ಹೈಕೋರ್ಟಿನ ಚೀಫ್ ಜಸ್ಟಿಸ್ ಆನರಬಲ್ ಸರ್ ಇಕ್ಬಾಲ್ ಅಹಮದ್ ಮತ್ತು ಜಸ್ಟಿಸ್ ಆನರಬಲ್ ಎಸ್. ಕೆ. ದಾರ್ ಈ ಇಬ್ಬರು ಜಡ್ಜರವರು ಕೇಸಿನ ವಿಷಯಗಳನ್ನೆಲ್ಲಾ ಬಹು ಚೆನ್ನಾಗಿ ವಿಮರ್ಶಿಸಿ ಅತ್ಯುತ್ತಮವಾದ ತೀರ್ಮಾನವನ್ನು ಮಾಡಿದರು. ಈ ಮಹನೀಯರ ತೀರ್ಮಾನದಿಂದ ಮಠಕ್ಕೆ ಮಹೋಪಕಾರವಾಯಿತೆಂದು ಬಹು ಸಂತೋಷದಿಂದ ಹೇಳಬೇಕಾಗಿದೆ. ಇವರು ತಮ್ಮ ತೀರ್ಮಾನಿನಲ್ಲಿ ಇಂಡಿಯಾದೇಶದಲ್ಲಿರುವ ವೀರಶೈವರಿಗೆಲ್ಲಾ ಪಂಚ ಪೀಠಗಳು ಪರಮಪೂಜ್ಯಸ್ಥಾನಗಳಾಗಿರುವವೆಂದು ಸ್ಪಷ್ಟವಾಗಿ ಉಲ್ಲೇಖಿಸಿರುವರು. ಅಲ್ಲದೆ ಕಾಶೀಪೀಠದ ಎಲ್ಲ ಪ್ರಾಚೀನ ದಾನಶಾಸನಗಳನ್ನೂ ಒಪ್ಪಿಕೊಂಡಿರುವರು. ಈ ಬಗ್ಗೆ ಅವರು ಬರೆದಿರುವ ಜಡ್ಜಮೆಂಟಿನ ವಾಕ್ಯಗಳು ಈ ಕೆಳಗೆ ಉಲ್ಲೇಖಿಸಲ್ಪಟ್ಟಿರುವವು.

The Math appertains to a well known sect in India, called Lingayats or worshippers of God Shiva, and it belongs to class among them called Jangams. The religious tradition

amongst the Jangams points to the existence of **five chief centres** of their worship and Benares is one of them.

A grant has been produced in this case from the Raja of Benares which goes back to **574** A. D. and **firmans** have been produced of the time of the Moghul Emperors **Humayun, Akbar, Jahagir, Shahjahan** and **Aurangzeb.** These grants show that certain lands in Benares and Chunar were granted to the Jangams or to the head of the Jangams at Benares from time to time. In one of the orders of Emperor **Shajahan,** dated 1632 A. D. printed at page 379 of the record, the Jangams are described as "**Mujawirs**" of Jangam Badi Math, which may be taken an a Mohammadan description of a Mahant of a Hindu Math.

" ಈ ಮಠವು ಇಂಡಿಯಾ ದೇಶದಲ್ಲಿ ಪ್ರಸಿದ್ಧರಾಗಿರುವ ಲಿಂಗಾಯತರು ಅಥವಾ ಶಿವಭಕ್ತರೆಂದು ಕರೆಯಲ್ಪಡುವ ಪಂಗಡಕ್ಕೆ ಸಂಬಂಧಪಟ್ಟಿದ್ದು ಅವರಲ್ಲಿ ಜಂಗಮರೆಂದು ಕರೆಯಲ್ಪಡುವ ಗುಂಪಿಗೆ ಸೇರಿದೆ. ಜಂಗಮರ ಪೂರ್ವಚರಿತ್ರೆಯು ಅವರಿಗೆ ಐದು ಮುಖ್ಯವಾದ ಪೂಜ್ಯ ಕೇಂದ್ರಗಳಿರುವವೆಂದು ತೋರಿಸುತ್ತದೆ. ಕಾಶಿಯು ಅವುಗಳಲ್ಲಿ ಒಂದಾಗಿರುವುದು.

ಈ ಕೇಸಿನಲ್ಲಿ ಕಾಶೀರಾಜರಿಂದ ಕೊಡಲ್ಪಟ್ಟ ಒಂದು ದಾನಶಾಸನವನ್ನು ಹಾಜರಮಾಡಲಾಗಿದೆ. ಅದು ಕ್ರಿ. ಶ. ೫೭೪ ನೆಯ ವರ್ಷಕ್ಕೆ

ಸಂಬಂಧಪಟ್ಟದ್ದಾಗಿರುವುದು. ಮತ್ತು ಮೊಗಲ್ ಚಕ್ರವರ್ತಿಗಳಾದ ಹುಮಾಯೂನ್, ಅಕ್ಬರ್, ಜಹಂಗೀರ್, ಶಹಜಹಾನ್ ಮತ್ತು ಔರಂಗಜೇಬ್ ಇವರುಗಳ ಫರ್ಮಾನುಗಳನ್ನು ಹಾಜರ್ ಮಾಡಲಾಗಿದೆ. ಈ ದಾನಶಾಸನಗಳು, ಕಾಶಿ ಮತ್ತು ಚುನಾರಿನ ಕೆಲವು ಜಮೀನುಗಳು ಇಲ್ಲಿಯ ಜಂಗಮರಿಗೆ ಅಥವಾ ಕಾಶಿಯಲ್ಲಿರುವ ಜಂಗಮರ ಅಧಿಪತಿಗಳಿಗೆ ಆಗಿಂದಾಗ್ಗೆ ಕೊಡಲ್ಪಟ್ಟಿರುವುವೆಂದು ತೋರಿಸುತ್ತವೆ. ರಿಕಾರ್ಡ್ ಪುಸ್ತಕದ ೩೭೪ ನೆಯ ಪುಟದಲ್ಲಿ ಪ್ರಿಂಟಾಗಿರುವ, ಕ್ರಿ. ಶ. ೧೬೩೭ ರಲ್ಲಿ ಶಹಜಹಾನ್ ಚಕ್ರವರ್ತಿಯಿಂದ ಕೊಡಲ್ಪಟ್ಟಿರುವ ಒಂದು ಆರ್ಡರಿನಲ್ಲಿ ಜಂಗಮರನ್ನು ಜಂಗಮವಾಡಿಮಠದ "ಮುಜವಿರ್ಸ್" ಎಂದು ಬರೆದಿದೆ. ಅಂದರೆ ಈ ಶಬ್ದವು "ಹಿಂದೂ ಮಠಾಧಿಪತಿ" ಎಂದು ಅರ್ಥವಾಗುವ ಉರ್ದು ಭಾಷೆಯ ಶಬ್ದವೆಂದು ಹೇಳಬಹುದು."

ಈ ರೀತಿ ಹೈಕೋರ್ಟಿನವರು ಶ್ರೀಕಾಶೀಪೀಠದ ಪ್ರಾಚೀನ ರಿಕಾರ್ಡುಗಳನ್ನೆಲ್ಲ ಆಮೂಲಾಗ್ರವಾಗಿ ವಿಮರ್ಶಿಸಿ ಯಥಾರ್ಥವಾಗಿ ಬರೆದಿರುವ ತೀರ್ಮಾನದಿಂದ, ಆ ಮಹಾಪೀಠದ ಪ್ರಾಚೀನತ್ವವು ಈ ಭೂಮಂಡಲದಲ್ಲಿ ಸದಾ ಬೆಳಗುವಂತಾಯಿತು. ಸತ್ಯಮೇವ ವಿಜಯತೇ.



ಶ್ರೀಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿರುವ
ಶ್ರೀಜಗದ್ಗುರು ವಿಶ್ವಾರಾಧ್ಯ ಧರ್ಮಪೀಠಕ್ಕೆ
ಕಾಶಿ, ರೀವಾ, ಮೈಹರ, ಮೈಸೂರು
ಮೊದಲಾದ ಹಿಂದೂರಾಜರೂ,
ಹುಮಾಯೂನ್, ಅಕಬರ್, ಜಹಂಗೀರ್,
ಶಹಜಹಾನ್, ಔರಂಗ್‌ಜೇಬ್
ಮೊದಲಾದ ಮುಸಲ್ಮಾನ್ ಚಕ್ರವರ್ತಿಗಳೂ
ಕೊಟ್ಟಿರುವ ದಾನಪತ್ರಗಳ ಭಾವಚಿತ್ರಗಳು.



ಶಹಜಹಾನ್ ಚಕ್ರವರ್ತಿಯು ಕಾಶೀಪೀಠಕ್ಕೆ
ಬರೆದುಕೊಟ್ಟಿರುವ ದಾನಶಾಸನ.

# ಶ್ರೀಜಗದ್ಗುರು ಕೇದಾರಪೀಠದ ಪ್ರಾಚೀನತ್ವ

ವೀರಶೈವಮತಸ್ಥಾಪಕ ಶ್ರೀಜಗದ್ಗುರು ಪಂಚಾಚಾರ್ಯರಲ್ಲೊಬ್ಬ ರಾದ ಶ್ರೀಮದೇಕೋರಾಮಾರಾಧ್ಯರು ಚತುರ್ಯುಗಗಳಲ್ಲಿಯೂ ಮದ್ರಾಸ್ ಇಲಾಖಾ ಕಾಕಿನಾಡ ಡಿಸ್ಟ್ರಿಕ್ ದ್ರಾಕ್ಷಾರಾಮಕ್ಷೇತ್ರದಲ್ಲಿರುವ ಶ್ರೀಭೀಮೇಶ್ವರ (ಭೀಮನಾಥ) ಲಿಂಗದಿಂದ ಅವತರಿಸಿ ಹಿಮಾಲಯದಲ್ಲಿ ಧರ್ಮಪೀಠವನ್ನು ಸ್ಥಾಪಿಸಿದರು. ಈ ವಿಷಯವನ್ನು ಸ್ವಾಯಂಭು ವಾಗಮವು—

ದ್ರಾಕ್ಷಾರಾಮೇ ಭೀಮನಾಥಲಿಂಗಾದ್ಯುಗಚತುಷ್ಟಯೇ ।
ಏಕೋರಾಮಸ್ಯ ಜನನಮಾವಾಸಸ್ತು ಹಿಮಾಲಯೇ ॥

ಇತ್ಯಾದಿ ಶ್ಲೋಕಗಳಿಂದ ಸಾರುತ್ತಿರುವದು. ಈ ಮಹಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಧರ್ಮಪೀಠವನ್ನು ಬಾಣಾಸುರನ ಮಗಳಾದ ಉಷಾ ದೇವಿಯು ಕಟ್ಟಿಸಿರುವದರಿಂದ ಆ ಪೀಠಕ್ಕೆ ಅಂದಿನಿಂದ "ಉಷಾಮಠ" ಎಂಬ ನಾಮವು ಪ್ರಾಪ್ತವಾಗಿರುವದು. ಈ ಮಹಾಪೀಠಕ್ಕೆ ಅನೇಕಜನ ರಾಜಮಹಾರಾಜರು ಬಹು ಪುರಾತನಕಾಲದಿಂದ ದಾನಮಾಡುತ್ತ ಬಂದಿರುವರು. ಈ ಬಗ್ಗೆ ಅನೇಕ ತಾಮ್ರಶಾಸನಗಳು ಮಠದಲ್ಲಿ ಈಗಲೂ ವಿರಾಜಿಸುತ್ತಿರುವವು. ಅವುಗಳಲ್ಲಿ ಒಂದು ತಾಮ್ರಶಾಸನವು ಬಹು ಪುರಾತನವಾಗಿರುವುದು. ಆ ಶಾಸನದ ವಿಷಯವನ್ನು ಇಲ್ಲಿ ಪ್ರತಿಪಾದಿಸ ಲಾಗುವುದು.

ಈಗ್ಗೆ ೫ ಸಾವಿರ ವರ್ಷಗಳ ಪೂರ್ವದಲ್ಲಿದ್ದ ಜನಮೇಜಯ ಭೂಪಾಲನು ತನ್ನ ಕಾಲದಲ್ಲಿ ಶ್ರೀಜಗದ್ಗುರು ಹಿಮವತ್ಕೇದಾರಪೀಠಾಧಿ ಪತಿಗಳಾಗಿದ್ದ ಆನಂದಲಿಂಗಜಂಗಮರೆಂಬ ಮಹಾಸ್ವಾಮಿಗಳವರಿಗೆ

ಒಂದು ದಾನಶಾಸನವನ್ನು ಬರೆದುಕೊಟ್ಟಿದ್ದಾನೆ. ಆ ಶಾಸನವು ಈ ಕೆಳಗೆ ಉಲ್ಲೇಖಿಸಲ್ಪಟ್ಟಿರುವುದು.

ಸ್ವಸ್ತಿಶ್ರೀವಿಜಯಾಭ್ಯುದಯಯುಧಿಷ್ಠಿರಶಕೇ ಪ್ಲವಂಗಾಖ್ಯೇ ಏಕೋನನವತಿತಮವತ್ಸರೇ ಸಹಸಿ ಮಾಸಿ ಅಮಾವಾಸ್ಯಾಯಾಂ ಸೋಮವಾಸರೇ ಶ್ರೀಮನ್ಮಹಾರಾಜಾಧಿರಾಜ ಪರಮೇಶ್ವರವೈಯಾಘ್ರಪದಗೋತ್ರಜ ಶ್ರೀಜನಮೇಜಯ ಭೂಪಾ ಇಂದ್ರಪ್ರಸ್ಥನಗರೀಸಿಂಹಾಸನಸ್ಥಾಃ ಸಕಲವರ್ಣಾಶ್ರಮಧರ್ಮಪ್ರತಿಪಾಲಕಾ ಉತ್ತರಹಿಮಾಲಯೇ ಶ್ರೀಕೇದಾರಕ್ಷೇತ್ರೇ ತತ್ರತ್ಯಮುನಿರುಷಾಮಠಸ್ಯ ಶ್ರೀಗೋಸ್ವಾಮಿ ಆನಂದಲಿಂಗಜಂಗಮಃ। ಶ್ರೀಮಚ್ಛಿಷ್ಯಜ್ಞಾನಲಿಂಗಜಂಗಮದ್ವಾರಾ ಆರಾಧಿತಶ್ರೀಕೇದಾರನಾಥಸ್ಯ ಪೂಜಾರ್ಥಂ ಚತುಸ್ಸೀಮಾಪರಿಮಿತಿಕ್ರಮಃ ॥ ಪೂರ್ವಭಾಗೇ ದಕ್ಷಿಣವಾಹಿನೀ ಮಂದಾಕಿನೀ, ಪಶ್ಚಿಮದಕ್ಷಿಣಭಾಗೇ ಕ್ಷೀರಗಂಗಾ, ಉತ್ತರ ಪಶ್ಚಿಮೇ ಮಧುಗಂಗಾ, ಪೂರ್ವೋತ್ತರಭಾಗೇ ಸ್ವರ್ಗದ್ವಾರ ನದೀ, ದಕ್ಷಿಣೇ ಸರಸ್ವತೀಮಂದಾಕಿನ್ಯೋಸ್ಸಂಗಮಃ । ಏತನ್ಮಧ್ಯೇ ಶ್ರೀಕೇದಾರಕ್ಷೇತ್ರಂ । ಭವಚ್ಛಿಷ್ಯಪರಂಪರಯಾ ಚಂದ್ರಾರ್ಕಪರ್ಯಂತಂ ನಿಧಿನಿಕ್ಷೇಪ ಜಲಪಾಷಾಣಾಗಾಮಿ ಸಿದ್ಧಸಾಧ್ಯತೇಜಃಸ್ವಾಮ್ಯಸಹಿತಂ। ಸ್ವಬುದ್ಧ್ಯಾನುಕೂಲ್ಯೇನಾಸ್ಮನ್ಮಾತೃ ಪಿತೄಣಾಂ ಶಿವಲೋಕಪ್ರಾಪ್ತ್ಯರ್ಥಂ ಶ್ರೀಕೇದಾರೇಶ್ವರ ಸನ್ನಿಧಾವುಪರಾಗಸಮಯೇ ಸಹಿರಣ್ಯ ಮಂದಾಕಿನೀಜಲಧಾರಾಪೂರ್ವಕಂ ಕ್ಷೇತ್ರಮಿದಂ ಹಸ್ತೇ ದತ್ತವಾನಸ್ಮಿ। ಏತದ್ಧರ್ಮಸಾಧನಸ್ಯ ಸಾಕ್ಷಿಣಃ ॥

ಆದಿತ್ಯಚಂದ್ರಾವನಿಲೋಽನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ । ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯ ವೃತ್ತಂ ॥ ದಾನಪಾಲನಯೋ

ರ್ಮಧ್ಯೇ ದಾನಾಚ್ಛ್ರೇಯೋಽನುಪಾಲನಂ । ದಾನಾತ್ಸ್ವರ್ಗ ಮವಾಪ್ನೋತಿ ಪಾಲನಾದ್ದ್ವಿಗುಣಂ ಫಲಂ ॥ ಸ್ವದತ್ತಾ ಪುತ್ರಿಕಾ ಜ್ಞೇಯಾ ಪಿತೃದತ್ತಾ ಸಹೋದರಾ । ಅನ್ಯದತ್ತಾತು ಜನನೀ ದತ್ತಭೂಮಿಂ ಪರಿತ್ಯಜೇತ್ ॥ ಸ್ವದತ್ತಾಂ ಪರ ದತ್ತಾಂ ವಾ ಬ್ರಹ್ಮವೃತ್ತಿಂ ಹರೇಚ್ಚ ಯಃ । ಷಷ್ಟಿವರ್ಷಸಹ ಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥

ಈ ಶಾಸನದ ಅಭಿಪ್ರಾಯವೇನೆಂದರೆ:—ಶ್ರೀಮನ್ ಮಹಾ ರಾಜಾಧಿರಾಜ ಹಸ್ತಿನಾವತೀಸಿಂಹಾಸನಾಧೀಶ್ವರ ವರ್ಣಾಶ್ರಮ ಧರ್ಮಪ್ರತಿಪಾಲಕನಾದ ಜನಮೇಜಯಭೂಪಾಲನು ಯುಧಿಷ್ಠಿರ ಶಕ ೮೯ ನೆಯ ಪ್ಲವಂಗನಾಮಸಂವತ್ಸರದ ಮಾರ್ಗಶೀರ್ಷಮಾಸ ಅಮಾವಾಸ್ಯಾ ಸೋಮವಾರದಿವಸ, ಶ್ರೀಕೇದಾರಕ್ಷೇತ್ರನಿವಾಸಿಗಳಾದ ಉಷಾಮಠಾಧೀಶಶ್ರೀಗೋಸ್ವಾಮಿ ಆನಂದಲಿಂಗಜಂಗಮರ ಶಿಷ್ಯರಾದ ಜ್ಞಾನಲಿಂಗಜಂಗಮರ ದ್ವಾರಾ ಆರಾಧಿತನಾದ ಶ್ರೀಕೇದಾರನಾಥನ ಪೂಜೆ ಗೋಸುಗವಾಗಿ ಮಂದಾಕಿನೀ, ಕ್ಷೀರಗಂಗಾ, ಮಧುಗಂಗಾ, ಸ್ವರ್ಗದ್ವಾರ ಗಂಗಾ, ಸರಸ್ವತೀಮಂದಾಕಿನೀನದಿಗಳ ಸಂಗಮ, ಇವುಗಳ ಮಧ್ಯ ದಲ್ಲಿರುವ ಶ್ರೀಕೇದಾರಕ್ಷೇತ್ರವನ್ನು ಸಿದ್ಧಸಾಧ್ಯತೇಜೋವಸ್ತುಗಳ ಅಧಿಕಾರಸಹಿತವಾಗಿ ನಮ್ಮ ಮಾತಾಪಿತೃಗಳಿಗೆ ಶಿವಲೋಕಪ್ರಾಪ್ತಿಯಾಗು ವುದಕ್ಕೋಸ್ಕರ ಶ್ರೀಕೇದಾರೇಶ್ವರನ ಸನ್ನಿಧಿಯೊಳು ಸೂರ್ಯಗ್ರಹಣ ಸಮಯದಲ್ಲಿ, ಹಿರಣ್ಯಸಹಿತಗಂಗೋದಕಧಾರಾಪೂರ್ವಕವಾಗಿ ತಮ್ಮ ಹಸ್ತದಲ್ಲಿ ಸಮರ್ಪಿಸಿದ್ದೇನೆ. ನಾನು ಮಾಡಿದ ಈ ದಾನಕ್ಕೆ ಸೂರ್ಯ, ಚಂದ್ರ, ವಾಯು, ಅಗ್ನಿ, ಆಕಾಶ, ಭೂಮಿ, ಜಲ, ಮನಸ್ಸು, ಯಮ, ಹಗಲು, ರಾತ್ರಿ, ಎರಡು ಸಂಧ್ಯೆಗಳು, ಧರ್ಮ ಇವುಗಳೇ ಸಾಕ್ಷಿಗಳೆಂದು ಉಲ್ಲೇಖಮಾಡಿ, ನಾನು ಮಾಡಿದ ಈ ದಾನವನ್ನು ಯಾರೂ ಅಪಹರಿಸ ಕೂಡದೆಂದೂ, ಅಪಹರಿಸಿದ್ದಾದರೆ ಅವರು ಅರವತ್ತುಸಾವಿರವರ್ಷಗಳವರೆಗೆ

ಕ್ರಿಮಿಗಳಾಗಿ ಜನ್ಮಿಸುವರೆಂದೂ, ಇತ್ಯಾದ್ಯಭಿಪ್ರಾಯಗರ್ಭಿತಶ್ಲೋಕ ಗಳನ್ನು ಅಂತ್ಯದಲ್ಲಿ ಉದಾಹರಿಸಿ, ಶಾಸನವನ್ನು ಪೂರ್ತಿಗೊಳಿಸಿದ್ದಾನೆ.

ಜನಮೇಜಯಮಹಾರಾಜನು ಕಲಿಯುಗದ ಪ್ರಾರಂಭದಲ್ಲಿ ಭರತ ಖಂಡದಲ್ಲಿ ವಾಸವಾಗಿದ್ದನೆಂದು ಅನೇಕಚರಿತ್ರಗಳಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಯುಧಿಷ್ಠಿರಶಕೆ ೮೯ ನೆಯ ಪ್ಲವಂಗನಾಮಸಂವತ್ಸರದಲ್ಲಿ ದಾನಮಾಡಿರುವುದಾಗಿ ಉಲ್ಲೇಖವಿರುವುದರಿಂದ, ಈ ಶಾಸನವು ಸುಮಾರು ೫ ಸಾವಿರವರ್ಷಗಳ ಪೂರ್ವದ್ದೆಂದು ಸ್ಪಷ್ಟವಾಗಿ ತೋರುತ್ತದೆ. ಈ ತಾಮ್ರಶಾಸನದ ವಿಷಯವನ್ನು ಪರಿಶೀಲಿಸಿದರೆ, ಪೂರ್ವಕಾಲದಲ್ಲಿ ಈ ಪೀಠಾಚಾರ್ಯರ ವೈಭವವು ಎಷ್ಟರಮಟ್ಟಿಗಿರಬಹುದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಜನಮೇಜಯಭೂಪಾಲನು* ದಾನಮಾಡಿದ ಸಮಸ್ತಭೂಮಿಯು ಐದುಸಾವಿರವರ್ಷಗಳಿಂದ ಇಲ್ಲಿಯವರೆಗೂ ಈ ಪೀಠ ದವರ ಸ್ವಾಧೀನದಲ್ಲಿಯೇ ಇದ್ದಿತು. ಈ ಭೂಮಿಯಲ್ಲಿ ಒಂದುಸಾವಿರದ ವರೆಗೆ ಗ್ರಾಮಗಳಿದ್ದವಂತೆ! ಈಗ್ಯೆ ೬೦-೭೦ ವರ್ಷಗಳ ಪೂರ್ವದಲ್ಲಿದ್ದ ಶ್ರೀಗಣೇಶಲಿಂಗಜಂಗಮ ಸ್ವಾಮಿಗಳವರ ಕಾಲದಲ್ಲಿ ಬ್ರಿಟಿಷ್ ಸರ್ಕಾರ ದವರು ಅನೇಕ ಗ್ರಾಮಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು, ನೂರಾರು ಗ್ರಾಮಗಳನ್ನು ಮಾತ್ರ ಇವರ ಸ್ವಾಧೀನಕ್ಕೆ ಬಿಟ್ಟುಕೊಟ್ಟಿರು ವುದಾಗಿ ತಿಳಿದುಬರುತ್ತದೆ. ಸದ್ಯಃ ಮಠಕ್ಕೆ ಗಢವಾಲ ಡಿಸ್ಟ್ರಿಕ್ಟಿನಲ್ಲಿ ೭೦ ಗ್ರಾಮಗಳು, ಆಲ್ಮೋರಾ ಡಿ॥ ನಲ್ಲಿ ೪೩ ಗ್ರಾಮಗಳು, ಟಿಹರಿ ರಾಜ್ಯದಲ್ಲಿ ೨೭ ಗ್ರಾಮಗಳು, ದೆಹರಾಡೂನ ಡಿ॥ ನಲ್ಲಿ ೨ ಗ್ರಾಮಗಳು, ನೈನಿತಾಲ ಡಿ॥ ನಲ್ಲಿ ೧ ಗ್ರಾಮ, ಈ ಪ್ರಕಾರ ೧೪೩ ಗ್ರಾಮಗಳು ಮಾತ್ರ ಇರುತ್ತವೆ. ಈ ಗ್ರಾಮಗಳ ಮೇಲೆ ಸರ್ವಾಧಿಕಾರವು ಮಠಾಧಿಪತಿಗಳದೇ ಆಗಿರುವುದು.

---

+ ಅರ್ಜುನನ ಪುತ್ರನು ಅಭಿಮನ್ಯು ; ಅಭಿಮನ್ಯುವಿನ ಪುತ್ರನು ಪರೀಕ್ಷಿತನು; ಪರೀಕ್ಷಿತನ ಪುತ್ರನು ಜನಮೇಜಯನು. ಈ ಜನಮೇಜಯಮಹಾರಾಜನೇ ದಾನ ಶಾಸನವನ್ನು ಬರೆದುಕೊಟ್ಟಿರುವನು.

ಭರತಖಂಡದಲ್ಲಿ ಸುಪ್ರಸಿದ್ಧವಾಗಿರುವ ದ್ವಾದಶಜ್ಯೋತಿರ್ಲಿಂಗ ಗಳಲ್ಲಿ ಅಗ್ರಸ್ಥಾನವನ್ನು ಪಡೆದು, ಹಿಮವತ್ಪರ್ವತದ ಮಧ್ಯದಲ್ಲಿ ರಾರಾಜಿ ಸುತ್ತಿರುವ ಶ್ರೀಕೇದಾರನಾಥ ದೇವಾಲಯದ ಸರ್ವಾಧಿಕಾರವು ಅನಾದಿ ಕಾಲದಿಂದ ಇಂದಿನವರೆಗೂ ಈ ಪೀಠಾಧಿಪತಿಗಳ ಸ್ವಾಧೀನದಲ್ಲಿಯೇ ಇರುತ್ತದೆ. ಇದಲ್ಲದೆ ಹಿಮಾಲಯಪ್ರಾಂತದಲ್ಲಿ ಅತ್ಯಂತ ಪ್ರಸಿದ್ಧವಾಗಿರುವ ಗುಪ್ತಕಾಶಿ, ಮಧ್ಯಮಹೇಶ್ವರ, ಓಖೀಮಠ, ಕಾಲೀಮಠ, ಉದಕ ಕುಂಡ, ಗೌರೀಕುಂಡ, ಗೌರೀಮಾಯಿ, ತುಂಗನಾಥ, ತ್ರಿಜುಗೀ ನಾರಾಯಣ, ನಾರಾಯಣತೀರ್ಥ, ನಾಲೀಭಗವತೀ, ಮೈಖಂಡ, ಸೋಮದ್ವಾರ, ಮೊದಲಾದ ೨೨ ಕ್ಷೇತ್ರಗಳ ಸರ್ವಾಧಿಪತ್ಯವು ಈ ಪೀಠಾಧಿ ಪತಿಗಳ ಅಧೀನದಲ್ಲಿಯೇ ಇರುವುದು. ಈ ಸಮಸ್ತಕ್ಷೇತ್ರಗಳು ಬಹು ಪುರಾತನಕಾಲದವಾಗಿರುವುವು. ಇವುಗಳ ಮಹಿಮೆಯನ್ನು ವ್ಯಾಸ ಮಹರ್ಷಿಗಳು ಸ್ಕಂದಪುರಾಣಾಂತರ್ಗತವಾದ ಕೇದಾರಖಂಡದಲ್ಲಿ ವಿಶೇಷವಾಗಿ ಬಣ್ಣಿಸಿದ್ದಾರೆ. ಹಿಮಾಲಯಪ್ರಾಂತದಲ್ಲಿ ಸುಪ್ರಸಿದ್ಧರಾಗಿರುವ ಟಿಹರಿ ಮಹಾರಾಜರವರು ಈ ಪೀಠದ ಶಿಷ್ಯರಾಗಿದ್ದಾರೆ. ಅಲ್ಲದೆ ಉದಯಪುರ, ಕಾಶ್ಮೀರ, ನೇಪಾಳ ಮೊದಲಾದ ಹದಿಮೂರುಜನ ಉತ್ತರದೇಶದ ಮಹಾರಾಜರು, ಈ ಪೀಠಕ್ಕೆ ಪ್ರತಿವರ್ಷವೂ ತಪ್ಪದೆ ಕಾಣಿಕೆಯನ್ನು ಸಮರ್ಪಿಸುತ್ತಿರುವರು. ಉತ್ತರ ಇಂಡಿಯಾ ದೇಶದಲ್ಲಿ ಕೇದಾರಮಠಾಧಿಪತಿಗಳಿಗೂ ಮತ್ತು ಬದರೀನಾಥ ಮಠಾಧಿಪತಿಗಳಿಗೂ ಬಹುದೊಡ್ಡ ಗೌರವವಿರುತ್ತದೆ. " ರಾವಲ್ " ಎಂಬ ಮಹಾಪದವಿಯು ಬ್ರಿಟಿಷ್ ಸರ್ಕಾರದಿಂದ ಈ ಎರಡು ಮಠಗಳಿಗೆ ಮಾತ್ರ ದೊರೆತಿರುವ ದಲ್ಲದೆ, ಇಂಡಿಯಾ ದೇಶದಲ್ಲಿ ಇನ್ನಾವ ಮಠಗಳಿಗೂ ದೊರೆತಿರುವುದಿಲ್ಲ. ಈರೀತಿ ರಾಜಾಧಿರಾಜಮಾನ್ಯವಾದ ಮಠವು ಭರತಖಂಡದಲ್ಲಿ ಎಲ್ಲಿಯೂ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶ್ರೀಕೇದಾರಪೀಠದ ಬಗ್ಗೆ ಈವರೆಗೆ ಪ್ರತಿಪಾದಿಸಿರುವ ಎಲ್ಲ ವಿಷಯಗಳನ್ನೂ ವಿಮರ್ಶಿಸಿ

ನೋಡಿದರೆ, ಆ ಮಹಾಪೀಠದ ಪ್ರಾಚೀನತ್ವವೂ ಪ್ರಾಶಸ್ತ್ಯವೂ ಸರ್ವರಿಗೂ ಸ್ಪಷ್ಟವಾಗಿ ತೋರಿಬರುವುದು. ಅಸ್ತು !

## ಶ್ರೀಕೇದಾರಪೀಠಕ್ಕೆ ಉತ್ತರಾಧಿಕಾರಿಗಳನ್ನು ನಿಯಮಿಸುವ ರೀತಿ

ಶ್ರೀಕೇದಾರಪೀಠಕ್ಕೆ ಆ ಮಠಾಧಿಪತಿಗಳು ಬಹು ಪ್ರಾಚೀನಕಾಲದಿಂದಲೂ ದಕ್ಷಿಣದೇಶದಲ್ಲಿರುವ ಜಂಗಮವಂಶೋದ್ಭವರಾದ ತಮ್ಮ ಶಿಷ್ಯರನ್ನು ತಾವೇ ಆರಿಸಿ, ಅವರನ್ನು ಉತ್ತರಾಧಿಕಾರಿಗಳನ್ನು ಮಾಡುತ್ತಿದ್ದರು. ಆದರೆ ೧೯೧೧ ನೆಯ ಇಸ್ವಿಯಲ್ಲಿ ಸರಕಾರದವರಿಂದ ಈ ಪದ್ಧತಿಯು ತೆಗೆದುಹಾಕಲ್ಪಟ್ಟಿತು. ಇದಕ್ಕೆ ಕಾರಣವೇನೆಂದರೆ—

ಈಗ್ಗೆ ೪೦-೫೦ ವರ್ಷಗಳ ಪೂರ್ವದಲ್ಲಿ ಈ ಪೀಠಾಧಿಪತಿಗಳಾಗಿದ್ದ ಇಬ್ಬರು ಸ್ವಾಮಿಗಳವರ ಕಾಲದಲ್ಲಿ ಪ್ರತಿವರ್ಷ ಮಠಕ್ಕೆ ಸಲ್ಲುವ ಆದಾಯವೆಲ್ಲವೂ ವೆಚ್ಚವಾಗಿ, ಮೇಲೆ ಲಕ್ಷಾಂತರ ರೂಪಾಯಿಗಳ ಸಾಲವಾಯಿತು. ಈ ರೀತಿ ಸಾಲವಾಗಲು ಆ ಸ್ವಾಮಿಗಳವರು ಮಾಡಿದ ದುಂದುವೆಚ್ಚವೇ ಕಾರಣ! ಈ ವಿಷಯವನ್ನೆಲ್ಲಾ ಆ ಕಾಲದ ಸರಕಾರಿ ಅಧಿಕಾರಿಗಳು ವಿಮರ್ಶಿಸಿ, ಇದನ್ನು ಹೀಗೆಯೇ ಬಿಟ್ಟರೆ ಈ ಪೀಠವು ಎಂದೂ ಉದ್ಧಾರವಾಗುವುದಿಲ್ಲವೆಂದು ಭಾವಿಸಿ, ಆ ಕಾಲದಲ್ಲಿದ್ದ ಶ್ರೀವಿಶ್ವಲಿಂಗಸ್ವಾಮಿಗಳವರನ್ನು ಪ್ರತಿವಾದಿಸ್ಥಾನಕ್ಕೆ ಸೇರಿಸಿ, ಸ್ವತಃ ಸರ್ಕಾರದವರೇ ವಾದಿಗಳಾಗಿ ಕೋರ್ಟಿನಲ್ಲಿ ವ್ಯಾಜ್ಯವನ್ನು ತಂದರು. ಈ ವಿಷಯವು ಆಗ್ಗೆ ಹೈಕೋರ್ಟಿನ ಅಧಿಕಾರವನ್ನು ಪಡೆದಿದ್ದ ಕುಮಾವು ಡಿವಿಜನ್ ಕಮಿಷನರವರ ಕೋರ್ಟಿನಲ್ಲಿ ವಿಮರ್ಶಿಸಲ್ಪಟ್ಟಿತು. ಕುಮಾವು ಡಿವಿಜನ್ ಕಮಿಷನರವರು ತಾ॥ ೮–೯–೧೯೧೧ ರಲ್ಲಿ ಈ ಪೀಠದ ಬಗ್ಗೆ ಒಂದು ಸ್ಕೀಮನ್ನು ತಯಾರಿಸಿದರು. ಅಂದಿನಿಂದ ಇಂದಿನ ವರೆಗೂ ಈ ಮಠದ ಆಡಳಿತವೆಲ್ಲವೂ ಆ ಸ್ಕೀಮಿನಂತೆಯೇ ನಡೆಯುತ್ತಿರುವುದು. ಆ ಸ್ಕೀಮಿನಿಂದ ಪೀಠಕ್ಕೆ

ಬಹಳ ಸುಖವಾಯಿತೆಂದೇ ಹೇಳಬಹುದಾಗಿದೆ. ಆದರೆ ಆ ಪೀಠಾಧಿಪತಿ ಗಳಿಗಿದ್ದ ಸ್ವಾತಂತ್ರ್ಯವೆಲ್ಲವೂ ಕಳೆದುಹೋಯಿತು. ಆ ಸ್ಕೀಮಿನಲ್ಲಿ ಮುಖ್ಯಸ್ವಾಮಿಗಳಾದವರಿಗೆ ಪ್ರತಿ ತಿಂಗಳು ಇಷ್ಟೇ ರೂಪಾಯಿಗಳು ಸಲ್ಲಬೇಕೆಂದೂ, ಅವರಿಗೆ ಇಷ್ಟೇ ಜನ ಶಿಷ್ಯರಿರಬೇಕೆಂದೂ, ಆ ಶಿಷ್ಯರಿಗೆ ಪ್ರತಿ ತಿಂಗಳು ಇಷ್ಟಿಷ್ಟೇ ರೂಪಾಯಿಗಳು ಸಲ್ಲಬೇಕೆಂದೂ ನಿರ್ಣಯವಾಗಿ ಬಿಟ್ಟಿದೆ. ಸ್ವಾಮಿಗಳವರು ಯಾರಾದರೂ ಶಿಷ್ಯರನ್ನು ತೆಗೆದುಹಾಕಿದರೆ, ಆ ಶಿಷ್ಯರು ಟೆಹರಿ ಮಹಾರಾಜರಲ್ಲಿ ಅಪೀಲುಮಾಡಿಕೊಳ್ಳಬಹುದೆಂದೂ, ಮಹಾರಾಜರವರ ಅಪ್ಪಣೆಯಂತೆ ಉಭಯರೂ ನಡೆದುಕೊಳ್ಳಬೇಕೆಂದೂ, ಪ್ರತಿ ವರ್ಷದ ಆದಾಯ ಮತ್ತು ವೆಚ್ಚವನ್ನು ಟೆಹರಿ ದರ್ಬಾರಿನವರು ಪ್ರತಿ ವರ್ಷವೂ ಪರಿಶೀಲಿಸಬೇಕೆಂದೂ ಸ್ಕೀಮಿನಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆ ಪೀಠಾಧಿಪತಿಗಳು ತಾವು ಜೀವಂತರಿರುವಾಗ ಉತ್ತರಾಧಿಕಾರಿಗಳನ್ನು ಮಾಡಲಿಕ್ಕೆ ಸ್ಕೀಮಿನಲ್ಲಿ ಅವರಿಗೆ ಅವಕಾಶವನ್ನು ಕೊಟ್ಟಿಲ್ಲ. ತಮ್ಮ ಉತ್ತರಾಧಿಕಾರಕ್ಕಾಗಿ ದಕ್ಷಿಣದೇಶದ ಜಂಗಮರಲ್ಲಿ ಯಾರಾದರೊಬ್ಬ ಶಿಷ್ಯರ ಹೆಸರನ್ನು ಸೂಚಿಸಿ ಮೃತ್ಯುಪತ್ರವನ್ನು ಬರೆದಿಡಲು ಮಾತ್ರ ಸಮ್ಮತಿ ಯನ್ನು ಕೊಟ್ಟಿದ್ದಾರೆ.

ಆ ಸ್ಕೀಮಿನಲ್ಲಿರುವ ಉತ್ತರಾಧಿಕಾರಿಗಳನ್ನು ನಿಯಮಿಸುವ ರೀತಿಯು ಈ ಕೆಳಗೆ ಉಲ್ಲೇಖಿಸಲ್ಪಟ್ಟಿರುವುದು.

11. The late Rawal during his terms of office nominates a successor. After the Rawal's decease a panchayat is held at Ukhimath at which the pujaries and chelas of the math, the officials of establishments of Kedarnath and attached shrines referred to in para 1, and the Malgujars and co-sharers of the assigned (143) villages referred to in para 2, have a

right to attend such panchayat as hitherto been held on the 11th day after the Rawal's death, but shall in future be held on date to be fixed as prescribed in para 12, below; at this panchayat the nomination of the late Rawal is declared and a Rawal is elected by those present. The result of the election is reported to the Commissioner of Kumaun for approval and confirmation. The Rawal may nominate a successor from among the chelas of the math. **The nominee must be jangam Gosain from the Deccan.** The nomination must be in writing and may be deposited in a sealed cover with the District Registrar.

12. On the death of Rawal, the District Judge shall appoint a special officer (who shall not be a Government official) to proceed to Ukhimath and superintend the election of a successor. The special officer so appointed shall receive from the temple funds such travelling and other expenses as may be allowed by the District Judge. The election shall take place as soon as possible after the death of the late Rawal on a date to be fixed by the District Judge and notified to the electors. The nomination made by the late Rawal shall be declared by the special officer

to the electors assembled at Ukhimath, who will then proceed to elect a successor in cases where the succession is disputed by opposing candidates. The votes of the electors shall be recorded. In case of equality of votes preference shall be given to the nominee of the late Rawal.

13. The result of the election shall be reported to the commissioner for confirmation. Unless the commissioner is satisfied that the election was vitiated by substantial irregularity, the nominee of the electors shall be approved by him. If however, he is so satisfied he shall record a declaration to this effect and inform the District Judge, who shall thereupon proceed to notify and have it carried out in the manner here in before prescribed by a second election.

ಮೇಲ್ಕಂಡ ಸ್ಕೀಮಿನ ಅಭಿಪ್ರಾಯವು ಈ ಕೆಳಗೆ ಕೊಡಲ್ಪಟ್ಟಿರುವದು—

11. ಗತಿಸಿದ ರಾವಲರು ತಮ್ಮ ಜೀವಿತಕಾಲದಲ್ಲಿ ತಮ್ಮ ಉತ್ತರಾಧಿಕಾರಿಯ ಹೆಸರನ್ನು ಗೊತ್ತುಪಡಿಸಬೇಕು. ರಾವಲರು ಮೃತರಾದ ಮೇಲೆ ಉಖೀಮಠದಲ್ಲಿರುವ ಶಿಷ್ಯರು, ಪೂಜಾರಿಗಳು, ಕೇದಾರನಾಥ ದೇವಸ್ಥಾನ ಮತ್ತು ಅದಕ್ಕೆ ಸಂಬಂಧಪಟ್ಟ (ಉದಕಕುಂಡ, ಓಖೀಮಠ, ಗುಪ್ತಕಾಶಿ, ಮಧ್ಯಮಹೇಶ್ವರ, ಕಾಳೀಮಠ, ತ್ರಿಜುಗಿನಾರಾಯಣ, ತುಂಗನಾಥ, ಗಾರಿಮಾಯಿ) ದೇವಸ್ಥಾನಗಳ ಪೂಜಾರಿಗಳು, ಕೆಲಸಗಾರರು ಮತ್ತು ಕೇದಾರಮಠಕ್ಕೆ ಸೇರಿದ ೧೪೩ ಇನಾಂ ಗ್ರಾಮಗಳ

ಕಂದಾಯ ಕೊಡುವ ಜಮಿನದಾರರು ಮತ್ತು ಭಾಗದಾರರು ಇವರು ಗಳಿಂದ ಕೂಡಿದ ಒಂದು ಪಂಚಾಯತಿಸಭೆಯು ಇಲ್ಲಿಯವರೆಗೆ ರಾವಲರು ಗತಿಸಿದ ೧೧ನೆಯ ದಿವಸ ಕೂಡುತ್ತಿತ್ತು. ಇನ್ನುಮುಂದೆ ೧೨ನೆಯ ಪ್ಯಾರಾದಲ್ಲಿ ವಿವರಿಸಿರುವಂತೆ ಡಿಸ್ಟ್ರಿಕ್ಟ್ ಜಡ್ಜರು ಗೊತ್ತುಮಾಡಿದ ದಿವಸ ಸೇರುವದು. ಈ ಪಂಚಾಯಿತಿ ಸಭೆಯು ಮುಂದೆ ಗತಿಸಿದ ರಾವಲರು ಮೃತ್ಯುಪತ್ರದಲ್ಲಿ ಬರೆದಿಟ್ಟಿರುವ ಉತ್ತರಾಧಿಕಾರಿಯ ಹೆಸರನ್ನು ತಿಳಿಸಿ, ಹೊಸ ರಾವಲರನ್ನು ಆರಿಸಬೇಕು. ಈ ಚುನಾವಣೆಯ ಫಲಿತಾಂಶವನ್ನು ಕುಮಾವು ಕಮಿಷನರ್ ಸಾಹೇಬರ ಒಪ್ಪಿಗೆಯ ಬಗ್ಗೆ ಅವರಿಗೆ ತಿಳಿಸ ಬೇಕು.

ರಾವಲರು ತಮ್ಮ ಮಠದಲ್ಲಿರುವ ಶಿಷ್ಯರಲ್ಲಿ ಒಬ್ಬರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಸೂಚಿಸಬಹುದು. ಹೀಗೆ ಸೂಚಿಸಲ್ಪಟ್ಟವರು **ದಕ್ಷಿಣದೇಶದ ಜಂಗಮಗೋಸಾಯಿ (ಬ್ರಹ್ಮಚಾರಿ)** ಆಗಿರಬೇಕು. ಹೀಗೆ ಸೂಚಿತವಾದ ಹೆಸರು ಬರವಣಿಗೆಯಲ್ಲಿದ್ದು, ಅದನ್ನು ಸೀಲು ಮಾಡಿದ ಕವರಿನಲ್ಲಿಟ್ಟು ಡಿಸ್ಟ್ರಿಕ್ಟ್ ರಿಜಿಸ್ಟ್ರಾರ್ ಅವರಲ್ಲಿ ಇಡಬೇಕು.

12. ರಾವಲರು ಗತಿಸಿದ ಮೇಲೆ ಉಖೀಮಠದಲ್ಲಿ ನಡೆಯ ಬೇಕಾದ ಉತ್ತರಾಧಿಕಾರನಿಯಾಮಕ ಸಭೆಯ ಮೇಲ್ವಿಚಾರಣೆಗಾಗಿ ಡಿಸ್ಟ್ರಿಕ್ಟ್ ಜಡ್ಜರು (ಸರಕಾರಿ ಅಧಿಕಾರಿಯಲ್ಲದ) ಒಬ್ಬ ಸ್ಪೆಷಲ್ ಅಧಿಕಾರಿ ಯನ್ನು ನಿಯಮಿಸಬೇಕು. ಈ ಅಧಿಕಾರಿಗಳು ತಮ್ಮ ಪ್ರಯಾಣದ ಮತ್ತು ಇತರ ವೆಚ್ಚಗಳನ್ನು ಡಿಸ್ಟ್ರಿಕ್ಟ್ ಜಡ್ಜರು ಗೊತ್ತುಮಾಡಿದಂತೆ ದೇವಸ್ಥಾನದ ಹಣದಿಂದ ಪಡೆಯಬೇಕು. ಈ ಚುನಾವಣೆಯು ರಾವಲರ ಮರಣಾನಂತರ ಆದಷ್ಟು ಶೀಘ್ರವಾಗಿ ನಡೆಯುವಂತೆ ಡಿಸ್ಟ್ರಿಕ್ಟ್ ಜಡ್ಜರು ಒಂದು ದಿನವನ್ನು ಗೊತ್ತುಮಾಡಬೇಕು. ಆ ದಿವಸ ಓಖೀಮಠದಲ್ಲಿ ಸೇರಿದ ಓಟುದಾರರಿಗೆ ಸ್ಪೆಷಲ್ ಅಧಿಕಾರಿಗಳು, ಗತಿಸಿದ ರಾವಲರು ಬರೆದಿಟ್ಟಿರುವ ಉತ್ತರಾಧಿಕಾರಿಯ ಹೆಸರನ್ನು ತಿಳಿಸಬೇಕು. ಆಗ್ಗೆ ಶಿಷ್ಯರಲ್ಲಿ ಯಾರಾ

ದರೂ ಉಮೇದುವಾರರಾಗಿ ನಿಂತು ರಾವಲರು ಬರೆದಿಟ್ಟಿರುವ ಸೂಚನೆಗೆ ವಿರೋಧಿಸಿದರೆ, ಆಗ್ಗೆ ಸ್ಪೆಷಲ್ ಅಧಿಕಾರಿಗಳು ಓಟಿನ ಮೂಲಕ ಚುನಾವಣೆಯನ್ನು ನಡೆಸಬೇಕು. ಓಟುಗಳು ಎರಡು ಕಡೆಗೂ ಸಮವಾಗಿ ಬಂದ ಪಕ್ಷದಲ್ಲಿ, ಗತಿಸಿದ ರಾವಲರು ಬರೆದಿರುವ ಹೆಸರಿಗೆ ಒಪ್ಪಿಗೆಯನ್ನು ಕೊಡಬೇಕು.

13. ಈ ಚುನಾವಣೆಯ ಫಲಿತಾಂಶವನ್ನು ಕಮಿಷನರ್ ಸಾಹೇಬರವರ ಒಪ್ಪಿಗೆಗಾಗಿ ಅವರಿಗೆ ತಿಳಿಸಬೇಕು. ಚುನಾವಣೆಯು ಸರಿಯಾದ ಕ್ರಮದಲ್ಲಿ ನಡೆದಿರುವದೆಂದು ಕಮಿಷನರವರಿಗೆ ಮನವರಿಕೆಯಾದ ಪಕ್ಷದಲ್ಲಿ ಎಲೆಕ್ಷನ್ ಮೂಲಕ ಆರಿಸಲ್ಪಟ್ಟವರ ಹೆಸರು ಅಂಗೀಕರಿಸಲ್ಪಡುವುದು. ಅವರಿಗೆ ಮನವರಿಕೆಯಾಗದಿದ್ದ ಪಕ್ಷದಲ್ಲಿ ಅವರು ಆ ರೀತಿ ರಿಕಾರ್ಡುಮಾಡಿ ಡಿಸ್ಟ್ರಿಕ್ಟ್ ಜಡ್ಜರಿಗೆ ತಿಳಿಸಬೇಕು. ಆಗ ಡಿಸ್ಟ್ರಿಕ್ಟ್ ಜಡ್ಜರು ಈ ವಿಷಯವನ್ನು ಪ್ರಸಿದ್ಧಪಡಿಸಿ, ಮೊದಲಿನಂತೆಯೇ ಎರಡನೆಯ ಸಾರೆ ಎಲೆಕ್ಷನ್ ನಡೆಯಿಸಬೇಕು.

ಕುಮಾವು ಡಿವಿಜನ್ನಿನ ಕಮಿಷನರ್ ಸಾಹೇಬರು ೧೯೧೧ ನೆಯ ಇಸ್ವಿಯಲ್ಲಿ ಈ ರೀತಿಯಾಗಿ ನಿಯಮಮಾಡಿರುವುದರಿಂದ ಆ ಪೀಠದ ಉತ್ತರಾಧಿಕಾರವು ಈ ನಿಯಮದಂತೆಯೇ ನಡೆಯುತ್ತಿರುವದು. ಕಮಿಷನರವರು ಕೇದಾರಪೀಠದ ಪ್ರಾಚೀನ ರಿಕಾರ್ಡುಗಳನ್ನೆಲ್ಲ ಆಮೂಲಾಗ್ರವಾಗಿ ಪರಿಶೋಧಿಸಿ, ಧರ್ಮಶಾಸ್ತ್ರಾನುಸಾರವಾಗಿ ಆ ಮಹಾಪೀಠದ ಆಧಿಪತ್ಯವನ್ನು ಹಿಮಾಲಯಕ್ಕೆ ೩೦೦೦ ಮೈಲು ದೂರದಲ್ಲಿರುವ ದಕ್ಷಿಣದೇಶದ ಜಂಗಮರಿಗೇನೇ ವಹಿಸಿರುವದನ್ನು ನೋಡಿದರೆ ಪರಮಾನಂದವೆನಿಸುತ್ತದೆ. ಇದು ವೀರಶೈವಮತದ ಮತ್ತು ಜಂಗಮವಂಶದ ಪುಣ್ಯವಿಶೇಷವೆಂದೇ ಹೇಳಬೇಕಾಗಿದೆ. ಜಂಗಮವಂಶೀಯರು ಅನಾದಿಕಾಲದಿಂದ ತಮ್ಮ ಸ್ವಾಧೀನದಲ್ಲಿರುವ ರಾಜಪೂಜಿತವಾದ ಆ ಪೀಠದ ಅಭಿವೃದ್ಧಿಯ ಕಡೆಗೆ ಗಮನವನ್ನೀಯಬೇಕೆಂದಾಶಿಸುತ್ತೇನೆ. ಶಿವಂ ಭೂಯಾತ್ !

# ಶ್ರೀಜಗದ್ಗುರು ಶ್ರೀಶೈಲಪೀಠದ ಪ್ರಾಚೀನತ್ವ.

## ಶ್ರೀಶೈಲಪೀಠಾಧೀಶ

## ಶ್ರೀಜಗದ್ಗುರು ಮಲ್ಲಿಕಾರ್ಜುನಶಿವಾಚಾರ್ಯರು.



ಬಹು ಪುರಾತನಕಾಲದಲ್ಲಿ ಶ್ರೀಶೈಲಧರ್ಮಪೀಠಕ್ಕೆ ಅಧಿಪತಿಗಳಾಗಿದ್ದ ಶ್ರೀಜಗದ್ಗುರು ಮಲ್ಲಿಕಾರ್ಜುನಶಿವಾಚಾರ್ಯಮಹಾಸ್ವಾಮಿಗಳವರ ಸಂಕ್ಷಿಪ್ತಚರಿತ್ರವು "ನನ್ನೆಚೋಡದೇವ"ನೆಂಬ ಮಹಾಕವಿಯಿಂದ ವಿರಚಿತವಾಗಿರುವ "ಆಂಧ್ರಕುಮಾರಸಂಭವ" ಎಂಬ ಗ್ರಂಥರತ್ನದಿಂದ ವೇದ್ಯವಾಗುತ್ತದೆ.

ಆಂಧ್ರಕುಮಾರಸಂಭವ ಗ್ರಂಥಕರ್ತೃವಾದ "ನನ್ನೆಚೋಡದೇವ"ನೆಂಬ ಮಹಾರಾಜನು ಕ್ರಿಸ್ತಶಕ ೯೪೦ ರಲ್ಲಿ ಕೃಷ್ಣಾನದೀತೀರದಲ್ಲಿರುವ "ಒರಯೂರು" ಎಂಬ ಪಟ್ಟಣವನ್ನಾಳುತ್ತಿದ್ದನು. ಈತನು ರಾಜನಾಗಿದ್ದು ಕವಿಕುಲತಿಲಕನೆನಿಸಿದ್ದನು. ಕರ್ಣಾಟಕದೇಶದಲ್ಲಿ ಷಡಕ್ಷರ ಕವಿಯ ಕವಿತೆಗೆ ಪ್ರಾಶಸ್ತ್ಯವಿರುವಂತೆ, ಆಂಧ್ರದೇಶದಲ್ಲಿ ನನ್ನೆಚೋಡದೇವನ ಕವಿತೆಗೆ ಪ್ರಾಶಸ್ತ್ಯವಿರುತ್ತದೆ. ಇಂತಹ ಕವಿಕುಲಶಿಖಾಮಣಿಯು ಕುಮಾರಸಂಭವ ಮಹಾಕಾವ್ಯವನ್ನು ಬರೆದು, ಆ ಕಾವ್ಯರತ್ನವನ್ನು ಪೂರ್ವಪರಂಪರೆಯಿಂದ ತನ್ನ ವಂಶಗುರುಗಳಾಗಿದ್ದ ಶ್ರೀಜಗದ್ಗುರು ಮಲ್ಲಿಕಾರ್ಜುನ ಶಿವಯೋಗಿಗಳ ಚರಣಾರವಿಂದಗಳಲ್ಲಿ ಸಮರ್ಪಿಸಿರುವುದು ಆತನ ನಿಜವಾದ ಗುರುಭಕ್ತಿಯನ್ನು ಪ್ರದರ್ಶಿಸುತ್ತದೆ.

ಈ ಕಾವ್ಯರತ್ನವನ್ನು ಆಂಧ್ರದೇಶದಲ್ಲಿ ಪರಿಶೋಧಕರೆಂದು ಪ್ರಸಿದ್ಧಿಯನ್ನು ಪಡೆದಿರುವ ರಾಜಮಹೇಂದ್ರ ನಗರನಿವಾಸಿಗಳಾದ ಶ್ರೀಮಾನ್ ಎಂ. ರಾಮಕೃಷ್ಣಕವಿ ಎಂ.ಎ. ಎಂಬವರು ಮುದ್ರಿಸಿ

ದ್ದಾರೆ. ಆಂಧ್ರದೇಶದ ಪಂಡಿತರೆಲ್ಲರೂ ಈ ಗ್ರಂಥದ ರಚನೆಯನ್ನು ನೋಡಿ, ಇದು ಆಂಧ್ರದೇಶದ ಆದಿಕಾವ್ಯವೆಂದು ಮುಕ್ತಕಂಠದಿಂದ ಹೊಗಳುತ್ತಿರುವರು. ಈ ಕಾವ್ಯದಲ್ಲಿ ಒಟ್ಟು ೧೨ ಆಶ್ವಾಸಗಳಿದ್ದು, ಶ್ರೀಷಣ್ಮುಖ ಸ್ವಾಮಿಯ ಉತ್ಪತ್ತಿವಿಷಯವು ವರ್ಣಿತವಾಗಿದೆ. ಈ ಮಹಾಕವಿಯು ಈ ಗ್ರಂಥವನ್ನು ಅತ್ಯಂತ ಗುರುಭಕ್ತಿಯಿಂದ ರಚಿಸಿರುವುದರಿಂದ, ಈ ಕಾವ್ಯದ ಅನೇಕ ಸ್ಥಳಗಳಲ್ಲಿ ತನ್ನ ಮೂಲಗುರುವಿನ ಮಹಿಮೆಯನ್ನು ಬಹುಚನ್ನಾಗಿ ವರ್ಣಿಸಿದ್ದಾನೆ. ಈ ಕಾವ್ಯದಲ್ಲಿ ಷಣ್ಮುಖಸ್ವಾಮಿಯ ಉತ್ಪತ್ತಿವಿಷಯವಿದ್ದರೂ, ಇದಕ್ಕೆ ಶ್ರೀಮಲ್ಲಿಕಾರ್ಜುನಜಂಗಮಶಿವ ಯೋಗಿಗಳೇ ಅಧಿಪತಿಗಳೆಂದು ಈ ಕೆಳಗೆ ತೋರಿಸಿರುವ ಪದ್ಯದಲ್ಲಿ ಹೇಳಿರುತ್ತಾನೆ.

ವೃ॥ ರವಿಕುಲಶೇಖರುಂಡು ಕವಿರಾಜಶಿಖಾಮಣಿ
ಕಾವ್ಯಕರ್ತ ಸ । ತ್ಕಪಿ ಭುವಿ ನನ್ನೆಚೋಡುಡಟೆ ಕಾವ್ಯಮು
ದಿವ್ಯಕಥಂ ಗುಮಾರಸಂ ॥ ಭವಮಟೆ ಸತ್ಕಥಾಧಿಪತಿ
ಭವ್ಯುಡು ಜಂಗಮಮಲ್ಲಿಕಾರ್ಜುನುಂ । ಡವಿಚಲಿತಾರ್ಥ
ಯೋಗಧರುಡಟ್ಟಿವಿನಂಗೊನಿಯಾಡ ಚಾಲದೇ ॥೫೭॥

(ಆಶ್ವಾಸ ೧)

"ಸೂರ್ಯಕುಲಶೇಖರನೂ, ಕವಿರಾಜಶಿಖಾಮಣಿಯೂ ಆದ ನನ್ನೆಚೋಡನು ಕರ್ತನಂತೆ! ಕಾವ್ಯವಂತೂ ದಿವ್ಯಕಥೆಯುಳ್ಳ ಕುಮಾರ ಸಂಭವವಂತೆ! ಈ ಪ್ರಬಂಧಕ್ಕೆ ಅಧಿಪತಿಯು ನಿಶ್ಚಲಯೋಗಿ ಭವ್ಯ ಜಂಗಮ ಮಲ್ಲಿಕಾರ್ಜುನನಂತೆ! ಅಂದಮೇಲೆ ಇದನ್ನು ಕೇಳಿ ಹೊಗಳಲಾಗದೇ ?" ಎಂಬುದು ಈ ಪದ್ಯದ ಅರ್ಥ.

ಈ ಕವಿರಾಜನು ತನ್ನ ಕಾವ್ಯದ ಪ್ರತಿಯೊಂದು ಆಶ್ವಾಸದ ಅಂತ್ಯದಲ್ಲಿಯೂ, ಈ ಕೆಳಗೆ ಬರೆದಂತೆ ವಾಕ್ಯವನ್ನು ಬರೆದು ಆಶ್ವಾಸವನ್ನು ಪೂರ್ತಿಗೊಳಿಸುತ್ತಾನೆ.

ಗದ್ಯ॥ ಇದಿ ಶ್ರೀಮಜ್ಜಂಗಮಮಲ್ಲಿಕಾರ್ಜುನ ದೇವ ದಿವ್ಯಶ್ರೀಪಾದಪಂಕಜ ಭ್ರಮರಾಯಮಾಣ ಕವಿರಾಜ ಶಿಖಾಮಣಿ ನನ್ನೆಚೋಡದೇವಪ್ರಣೀತಂ ಬೈನ ಕುಮಾರ ಸಂಭವಂಬನು ಕಥಯಂದು ಬ್ರಥಮಾಶ್ವಾಸಮು ॥೧೩೩॥

ಶ್ರೀಮಲ್ಲಿಕಾರ್ಜುನ ಜಂಗಮಶಿವಯೋಗಿಗಳು ಶ್ರೀಶೈಲಪೀಠಾಧಿ ಪತಿಗಳೂ, ಸಕಲಶಾಸ್ತ್ರಪಾರಂಗತರೂ, ಸಕಲವಿದ್ಯಾಗುರುಗಳೂ, ಮುನಿ ಕುಲತಿಲಕರೂ ಆಗಿದ್ದರೆಂಬ ವಿಷಯದಲ್ಲಿ ಈ ಕೆಳಗೆ ಉದಾಹರಿಸಿರುವ ವಾಕ್ಯಗಳೇ ಬಲವಾದ ಸಾಕ್ಷಿಗಳಾಗಿವೆ. ಈ ವಾಕ್ಯಗಳ ಅರ್ಥವನ್ನು ವಿಚಾರಮಾಡಿನೋಡಿದರೆ, ಆ ಜಗದಾಚಾರ್ಯರ ಸಾಮರ್ಥ್ಯವು ಎಷ್ಟರ ಮಟ್ಟಿಗಿರಬಹುದೆಂಬುದು ಸರ್ವರಿಗೂ ವೇದ್ಯವಾಗುತ್ತದೆ. ಗದ್ಯರಚನಾಶೈಲಿ ಯಂತೂ ಬಹು ಹೃದಯಂಗಮವಾಗಿದ್ದು ಪ್ರತಿಯೊಬ್ಬರ ಹೃತ್ಕಮಲ ವನ್ನು ವಿಕಸನಗೊಳಿಸುವುದಲ್ಲದೆ, ಕವಿಯ ಅತ್ಯದ್ಭುತ ಕಾವ್ಯಕರ್ತೃತ್ವ ಶಕ್ತಿಯನ್ನು ಪ್ರಕಾಶಪಡಿಸುತ್ತದೆ.

ಗದ್ಯ॥ ಕಾವುನಂ ಬರಮಶ್ರೀನಗೋತ್ತುಂಗ ಮಣಿಶ್ರೀ ಸಂಗತ ಮಲ್ಲಿಕಾರ್ಜುನದೇವತಾಕಂಬೈ ಜಗಂಬುಲಂ ಬ್ರತ್ಯಕ್ಷಂಬೈ ಪ್ರವರ್ತಿಲ್ಲುಟಿ ಜಂಗಮ ಮಲ್ಲಿಕಾರ್ಜುನ ದೇವುಂಡೈ ಪ್ರಾಣಾಯಾಮಾದಿಷಡಂಗೋಪಾಂಗ ಸಕಲ ಯೋಗಿಜನಾರಾಧಿತುಂಡಗುಟಂ ಬರಮಯೋಗೀಂದ್ರುಂಡೈ ನ್ಯಾಯವೈಶೇಷಿಕಾದಿಷಟ್ತರ್ಕಕರ್ಕಶುಂಡಗುಟಂ ಬರ ವಾದಿಭಯಂಕರುಂಡೈ ಜನ್ಮಮರಣಾದಿದುಃಖಾರ್ಣವೋ ತ್ತೀರ್ಣಸ್ಫೂರ್ತಿಯಮಾನಮಾನಸುಂಡಗುಟನುಂ ಬರಮಾ ನಂದಹೃದಯುಂಡೈ ಘೋರಸಂಸಾರಪಾರಾವಾರೋತ್ತಾರಣ ಕಾರಣಾನೂನವೈರಾಗ್ಯನಿರತುಂಡಗುಟ ಸಮ್ಯಗ್ಜ್ಞಾನ ಸ್ವರೂಪುಂಡೈ ವೇದಷಡಂಗಶಾಸ್ತ್ರಪುರಾಣೇತಿಹಾಸಾಗಮಾ

ದಿಸಕಲಕಲಾಸ್ವರೂಪಾಪಾರವಾಣೀಧರುಂಡಗುಟೆ ನಿಖಿಲ ವಿದ್ಯಾಗುರುಂಡೈ ಸಕಲಜನಾಭೀಷ್ಟವಿಮಲಜ್ಞಾನಾಸೂನ ಫಲಪ್ರದಾಯಕುಂಡಗುಟೆಂ ಬರಮಸ್ವರೂಪುಂಡೈ ಸಮಸ್ತ ವಿದ್ವಜ್ಜನಮನೋಮಾನಸಕೇಲೀಲಾಲಸುಂಡಗುಟೆಂ ಬರಮ ಹಂಸಸ್ವರೂಪುಂಡೈ ಯತ್ಯುತ್ತಮಪುರುಷಾರ್ಥಪ್ರವರ್ತಿತುಂ ಡಗುಟೆಂ ಬರಮಬ್ರಹ್ಮಸ್ವರೂಪುಂಡೈ ನಿಸ್ತ್ರೈಗುಣ್ಯಪದಾರ್ಥ ಪ್ರವರ್ತಿತುಂಡಗುಟೆ ಗುಣಗಣಾತೀತುಂಡೈ ಸದ್ಭಕ್ತಜನಾ ತ್ಮಾಲೋಕನೈಕಹೇತುಭೂತುಂಡಗುಟೆ ಮುನಿಜನಮುಖ ಮಣಿಮುಕುರುಂಡೈ ನೆಗಡು ಸದ್ಗುರುಂಡೈನ ಜಂಗಮ ಮಲ್ಲಿಕಾರ್ಜುನದೇವುನಕು ॥೫೮॥ (ಆಶ್ವಾಸ ೧)

ಈ ಮಲ್ಲಿಕಾರ್ಜುನಶಿವಯೋಗಿಗಳು ಶ್ರೀಶೈಲಜಗದ್ಗುರು ಧರ್ಮ ಪೀಠಾಧಿಪತಿಗಳಾದುದರಿಂದ ಈ ಕವಿರಾಜನು ಆ ಗುರುಸಾರ್ವಭೌಮ ನನ್ನು "ಅಖಿಲಜಗದ್ಗುರು" "ಸಮಸ್ತಜಗದ್ಗುರುವಂದ್ಯ" ಇತ್ಯಾದಿ ವಿಶೇಷಣಗಳಿಂದ ನಾನಾವಿಧವಾಗಿ ಕೊಂಡಾಡಿದ್ದಾನೆ. ಆ ಪದ್ಯ ಗಳು ಈ ಕೆಳಗೆ ಉದಾಹರಿಸಲ್ಪಟ್ಟಿವೆ.

ಕಂ॥ ಸದ್ಗುರುಡನಜನುನಖಿಲಜ ।
ಗದ್ಗುರುನಕು ಸಂತತೋಪಕಾರಿಕಿ ಮುನಿವಿ ॥
ದ್ವದ್ಗುರುನಕು ಕವಿಬುಧಹಿತ ।
ಮದ್ಗುರುನಕಪಾರಧರ್ಮಮತಿಕಿನ್ ರತಿಕಿನ್ ॥೬೦॥
(ಆಶ್ವಾಸ ೧)

"ಸದ್ಗುರುವೂ, ಅಖಿಲಜಗದ್ಗುರುವೂ, ಸಂತತೋಪಕಾರಿಯೂ, ಮುನಿಗುರುವೂ, ವಿದ್ವದ್ಗುರುವೂ, ಕವಿಬುಧಗುರುವೂ, ಮದ್ಗುರುವೂ, ಅಪಾರಧರ್ಮಮತಿಯೂ ಆದ ಜಂಗಮ ಮಲ್ಲಿಕಾರ್ಜುನನಿಗೆ ನನ್ನ ಕೃತಿಯು ಸಮರ್ಪಿತವಾಗಲಿ." ಎಂಬುದು ಮೇಲಿನ ಪದ್ಯದ ಅಭಿಪ್ರಾಯ.

ವೃ॥ ಮನುಮುನಿನಿಭಚಾರುಚರಿತ್ರ ಬವಿತ್ರನಮಾ
ನುಷಪೌರುಷವರ್ತಿ ಜಗ । ಜ್ಜನನುತ ನಿರ್ಮಲಕೀರ್ತಿರಮಾ
ವಿಭುಶಾಶ್ವತಯೋಗಪದಸ್ಥಿರು ಸ ॥ ನ್ಮುನಿಜನಮುಖ್ಯ
ಶಿವಾಗಮವೇದಿ ನಮೋಘವಚೋನಿಧಿ ಧೀನಿಧಿ ಬಾ । ವನ
ತರಮೂರ್ತಿ ಸಮಸ್ತ ಜಗದ್ಗುರುವಂದ್ಯ ನನಿಂದ್ಯ ಸದಾತ್ಮ
ವಿದುನ್ ॥೭೮೧॥ (ಆಶ್ವಾಸ ೧೧)

"ಮನುಮುನಿಸಮಸಚ್ಚರಿತ್ರನೂ, ಅಮಾನುಷಪೌರುಷಶಾಲಿಯೂ, ಜಗಜ್ಜನನುತನಿರ್ಮಲಕೀರ್ತಿರೂಪಲಕ್ಷ್ಮೀಪತಿಯೂ, ಅಕ್ಷಯಯೋಗಪದನಿಷ್ಠಲನೂ, ಸನ್ಮುನಿಜನಮುಖ್ಯನೂ, ಶಿವಾಗಮಜ್ಞನೂ ಅಮೋಘವಚೋನಿಧಿಯೂ, ಪವಿತ್ರಮೂರ್ತಿಯೂ, ಸಮಸ್ತ ಜಗದ್ಗುರುವಂದ್ಯನೂ, ಅನಿಂದ್ಯನೂ ಆದ ಶ್ರೀಮಲ್ಲಿಕಾರ್ಜುನನಿಗೆ ನಮಸ್ಕಾರವು."

ಎಂಬುದು ಈ ಪದ್ಯದ ಅಭಿಪ್ರಾಯ.

ಈ ಕೆಳಗೆ ಉದಾಹರಿಸಿರುವ ಪದ್ಯಗಳು ಈ ಗುರುಸಾರ್ವಭೌಮನು "ಶಿವಯೋಗತತ್ಪರ"ನೆಂದೂ, "ಶಿವತತ್ತ್ವಪ್ರಕಾಶಕ"ನೆಂದೂ ಸಾರುತ್ತವೆ.

ಕಂ॥ ರಮಣೀರಮಣೀಯಸುರೂ ।
ಪಮಯಾಂಗಜಶಸ್ತ್ರವಜ್ರಪಂಜರನಿಭ ಸ ॥
ದ್ವಿಮಲ ಶಿವಯೋಗತತ್ಪರು ।
ಡಮಲಚರಿತ್ರಂಡು ಮಲ್ಲಿಕಾರ್ಜುನುಡೆಲಮಿನ್ ॥೨೪೨॥
(ಆಶ್ವಾಸ ೨)

ಕಂ॥ ಶ್ರೀಮದಶೇಷಮುನೀಂದ್ರ ।
ಗ್ರಾಮಣಿನುತಚರಿತು ವಿಗತಕಲ್ಮಷ ಶಿವತ ॥
ತ್ತ್ವಾಮಲಮತಿಪ್ರಕಾಶು ಡ ।
ಯಾಮೃತಸರಸೀಜು ಮಲ್ಲಿಕಾರ್ಜುನದೇವುನ್ ॥೩೫೭॥
(ಆಶ್ವಾಸ ೪)

" ಸ್ತ್ರೀಸೌಂದರ್ಯವೆಂಬ ಮದನಾಸ್ತ್ರಕ್ಕೆ ವಜ್ರಪಂಜರಸದೃಶನೂ, ವಿಮಲ ಶಿವಯೋಗತತ್ಪರನೂ, ಶುದ್ಧ ಚರಿತನೂ ಆದ ಮಲ್ಲಿಕಾರ್ಜುನನು ಇಲ್ಲಿ ವಿರಾಜಿಸುವನು."

" ಅಖಿಲಮುನೀಂದ್ರಸಮೂಹಸಂಸ್ತುತಚರಿತ್ರನೂ, ನಿರ್ಮಲನೂ, ವಿಮಲಶಿವತತ್ತ್ವಪ್ರಕಾಶಕನೂ, ಕರುಣಾಮೃತಾಬ್ಧನೂ ಆದ ಮಲ್ಲಿಕಾರ್ಜುನನನ್ನು ನಮಸ್ಕರಿಸುವೆನು."

ಎಂಬುದು ಈ ಮೇಲಿನ ಪದ್ಯಗಳ ಅಭಿಪ್ರಾಯ.

ಈ ಕವಿರಾಜನು ಕೆಳಗಿನ ಪದ್ಯದಿಂದ ಶ್ರೀಮಲ್ಲಿಕಾರ್ಜುನ ಶಿವಯೋಗಿಯನ್ನು ಮನುಷ್ಯಾಕಾರವನ್ನು ಧರಿಸಿದ ಮಹೇಶ್ವರನೆಂದು ಕೊಂಡಾಡಿದ್ದಾನೆ.

ಕಂ॥ ವಿನುತಬ್ರಹ್ಮರ್ಷಿಕಿ ನ ।
ತ್ಯನುಪಮಸಂಯಮಿಕಿ ಸಜ್ಜನಾಭರಣುನಕುನ್ ॥
ಮನುಜಾಕಾರಮಹೇಶುನ ।
ಕನುಪಮಚರಿತುನಕು ಮಲ್ಲಿಕಾರ್ಜುನಮುನಿಕಿನ್ ॥೬೬॥
(ಆಶ್ವಾಸ ೧)

" ಬ್ರಹ್ಮರ್ಷಿಪೂಜಿತನೂ, ಅಸದೃಶಸಂಯಮಿಯೂ, ಸಜ್ಜನಾಭರಣನೂ, ಮಾನವಾಕಾರವನ್ನು ಧರಿಸಿದ ಮಹೇಶ್ವರನೂ, ಅನುಪಮ ಚರಿತ್ರನೂ ಆದ ಶ್ರೀಮಲ್ಲಿಕಾರ್ಜುನಮುನಿಗೆ ಸಮರ್ಪಿತವಾಗಲಿ."

ಎಂಬುದು ಈ ಪದ್ಯದ ಅಭಿಪ್ರಾಯ.

ಈ ಕವಿರಾಜನು ಈ ಮುಂದೆ ಉದಾಹರಿಸಿರುವ ಪದ್ಯದಲ್ಲಿಶ್ರೀಮಲ್ಲಿಕಾರ್ಜುನಜಂಗಮಗುರುಸಾರ್ವಭೌಮನಿಗೆ " ಬ್ರಾಹ್ಮಣಕುಲೋತ್ತಂಸ" ಎಂಬ ವಿಶೇಷಣವನ್ನು ಕೊಟ್ಟಿರುತ್ತಾನೆ. ಈ ವಿಷಯವನ್ನು ಈಗಿನ ವರ್ಣಾಶ್ರಮಧರ್ಮಧ್ವಂಸಕರಾದ ಸುಧಾರಕರು ನಿರ್ಮಲಹೃದಯದಿಂದ ಪರಿಶೀಲಿಸಬೇಕು.

ವೃ॥ ಸುಕವಿಸ್ತುತ್ಯುಡು ನಿತ್ಯುಡೂರ್ಜಿತುಡು ಸುಶ್ಲೋ-
ಕುಂಡಶೋಕುಂಡು ಸ । ರ್ವಕಳಾಧಾರುಡು ಧೀರುಡಾರ್ಯ
ಜನತಾವರ್ಯುಂಡವಾರ್ಯುಂಡು ಧ ॥ ರ್ಮಕಥಾಸಂಗುಡಸಂಗು
ಡಾದ್ಯುಡು ಜಗನ್ಮಾನ್ಯುಂಡು ಧನ್ಯುಂಡು ಬ್ರ । ಹ್ಮಕುಲೋ
ತ್ತಂಸುಡುಹಂಸುಡುತ್ತಮಗಣಾಯತ್ತುಂಡಮತ್ತುಂಡೆಡ್ದನ್
॥೧೦೦೭॥ (ಆಶ್ವಾಸ ೧೨)

" ಸತ್ಕವಿಸ್ತುತ್ಯನೂ, ನಿತ್ಯನೂ, ಊರ್ಜಿತನೂ, ಸುಶ್ಲೋಕನೂ, ಅಶೋಕನೂ (ಶೋಕರಹಿತನೂ), ಸರ್ವಕಲಾಧಾರನೂ, ಧೀರನೂ, ಆರ್ಯಜನತಾವರ್ಯನೂ, ಅವಾರ್ಯನೂ, ಧರ್ಮಕಥಾಸಂಗನೂ, ಅಸಂಗನೂ, ಆದ್ಯನೂ, ಜಗನ್ಮಾನ್ಯನೂ, ಧನ್ಯನೂ, ಬ್ರಾಹ್ಮಣಕುಲೋತ್ತಂಸನೂ, ಹಂಸನೂ, ಉತ್ತಮಗಣಾಯತ್ತನೂ, ಅಮತ್ತನೂ ಆದ ಮಲ್ಲಿಕಾರ್ಜುನಯೋಗಿಯು ವಿರಾಜಿಸುತ್ತಿರುವನು."

ಎಂಬುದು ಈ ಮೇಲಿನ ಪದ್ಯದ ಅಭಿಪ್ರಾಯ.

ಇದೇ ರೀತಿಯಾಗಿ ಈ ಕವಿರಾಜಚೂಡಾಮಣಿಯು ತನ್ನ ವಂಶದ ಮೂಲಗುರುವಾದ ಈ ಗುರುಸಾರ್ವಭೌಮನನ್ನು ನಾನಾವಿಧವಾಗಿ ಕೊಂಡಾಡಿದ್ದಾನೆ.

ಈ ಮಹಾಕವಿಯಿಂದ ವರ್ಣಿಸಲ್ಪಟ್ಟಿರುವ ಶ್ರೀಜಗದ್ಗುರು ಮಲ್ಲಿಕಾರ್ಜುನ ಶಿವಯೋಗಿಯು ಕವಿಯ ಸಮಕಾಲೀನನಾಗಿರದೆ, ಬಹು ಪ್ರಾಚೀನ ಕಾಲದವನಾಗಿರುವನೆಂಬ ವಿಷಯವನ್ನು, ಈ ಕವಿಯೇ ತನ್ನ ಕುಮಾರಸಂಭವಕಾವ್ಯದ ೬ನೆಯ ಆಶ್ವಾಸದಲ್ಲಿ ಸ್ಪಷ್ಟಪಡಿಸಿದ್ದಾನೆ. ಇದರಿಂದ ಈ ಆಚಾರ್ಯಪುಂಗವರು ಬಹುಪುರಾತನ ಕಾಲದಲ್ಲಿ ಶ್ರೀಶೈಲಪೀಠಾಧಿಪತಿಗಳಾಗಿದ್ದರೆಂದು ಸ್ಪಷ್ಟವಾಗುವದು. ಈ ಮಹಾಕವಿಯು ಸಾಮಾನ್ಯನಲ್ಲ! ಮಹಾರಾಜನಾಗಿದ್ದಾನೆ; ಅಲ್ಲದೆ ಪ್ರಾಮಾಣಿಕ ಕವಿಶಿಖಾಮಣಿಯೆನಿಸಿ ಆಂಧ್ರದೇಶದಲ್ಲಿ ಅತ್ಯಂತ ಪ್ರಖ್ಯಾತಿಗೊಂಡಿದ್ದಾನೆ.

ಮತ್ತು ಆಧುನಿಕನಲ್ಲ! ಕ್ರಿಸ್ತಶಕ ೯೪೦ ರಲ್ಲಿದ್ದವನು. ಅಂದರೆ ಈಗ್ಗೆ ೧೦೦೦ ವರ್ಷಗಳ ಪೂರ್ವದಲ್ಲಿದ್ದನೆಂದು ಆಂಧ್ರದೇಶದ ಸುಪ್ರಸಿದ್ಧ ಚರಿತ್ರಸಂಶೋಧಕರೇ ನಿರ್ಣಯಿಸಿದ್ದಾರೆ. ಈ ವಿಷಯವು ನಿಜವಾದ ವೀರಶೈವರ ಮನಸ್ಸಿಗೆ ಅಪಾರವಾದ ಸಂತೋಷವನ್ನುಂಟುಮಾಡತಕ್ಕ ದಾಗಿದೆ. ಶ್ರೀಜಗದ್ಗುರುಪಂಚಾಚಾರ್ಯರ ಧರ್ಮಪೀಠಗಳು ನಾಲ್ಕು ಯುಗಗಳಿಂದಲೂ ವಿರಾಜಿಸುತ್ತಿರುವವೆಂಬ ಶಿವಾಗಮಪ್ರಾಮಾಣ್ಯವನ್ನು ಈ ಆಂಧ್ರಕುಮಾರಸಂಭವಕಾವ್ಯವು ಸಮರ್ಥಿಸುತ್ತಿರುವುದು. ಅಸ್ತು!

ಇದಲ್ಲದೆ ಶ್ರೀಶೈಲಧರ್ಮಪೀಠದ ಪ್ರಾಚೀನತ್ವವು ವ್ಯಾಸಮಹರ್ಷಿ ಯಿಂದ ವಿರಚಿತವಾಗಿರುವ ಸ್ಕಂದಪುರಾಣಾಂತರ್ಗತ "ಶಂಕರಸಂಹಿತೆ" ಯಿಂದಲೂ ವೇದ್ಯವಾಗುವುದು.

ತಸ್ಮಿಂಚ್ಛ್ರೀಪರ್ವತೇ ಪುಣ್ಯೇ ಸಂಸಾರಾಮಯಭೇಷಜೇ ।<br>
ಆಸ್ತೇ ಲಿಂಗಾಂಗಸಂಬಂಧೀ ಸದಾನಂದಾಹ್ವಯೋ ಮುನಿಃ ॥೯೧॥<br>
ಸರ್ವೋಪನಿಷದರ್ಥಜ್ಞಃ ಶಿವಧ್ಯಾನಪರಾಯಣಃ ।<br>
ಭಸ್ಮಾವಲಿಪ್ತಸರ್ವಾಂಗೋ ರುದ್ರಾಧ್ಯಾಯಜಪಾಶ್ರಯಃ ॥೯೨॥<br>
ರುದ್ರಾಕ್ಷಮಾಲಾಭರಣೋ ಧೃತಪಾಶುಪತವ್ರತಃ ।<br>
ಅತಿವರ್ಣಾಶ್ರಮೀ ಯೋಗೀ ಜೀವನ್ಮುಕ್ತೋ ಜಗದ್ಗುರುಃ ॥೯೩॥

ಶಂಕರಸಂಹಿತೆಯ ೮೫ನೆಯ ಅಧ್ಯಾಯದಲ್ಲಿರತಕ್ಕ ಈ ಶ್ಲೋಕ ಗಳಿಂದ ಯುಗಾಂತರದಲ್ಲಿ ಶ್ರೀಶೈಲಧರ್ಮಪೀಠಕ್ಕೆ "ಸದಾನಂದ" ಎಂಬ ಹೆಸರಿನ ಜಗದ್ಗುರುಗಳು ಅಧಿಪತಿಗಳಾಗಿದ್ದರೆಂದು ತೋರಿಬರುತ್ತದೆ.

ಈ ಎಲ್ಲ ವಿಷಯಗಳನ್ನೂ ವಿಮರ್ಶಿಸಿ ನೋಡಿದರೆ, ಶ್ರೀಶೈಲ ಧರ್ಮಪೀಠವು ಬಹು ಪ್ರಾಚೀನವಾದುದೆಂದು ಸ್ಪಷ್ಟವಾಗಿ ತೋರಿಬರು ತ್ತದೆ. ಈ ರೀತಿಯಾಗಿ ಭರತಖಂಡದಲ್ಲಿ ಅನಾದಿಕಾಲದಿಂದ ಪ್ರಜ್ವಲಿಸು ತ್ತಿರುವ ಪಂಚ ಧರ್ಮಪೀಠಗಳ ವಿಷಯದಲ್ಲಿ ಸರ್ವರೂ ಅಸದೃಶವಾದ ಭಕ್ತಿಯನ್ನು ವಹಿಸಿ ಧನ್ಯರಾಗಬೇಕೆಂದು ಹಾರೈಸುತ್ತೇನೆ.

# ಶ್ರೀಜಗದ್ಗುರು ಶ್ರೀಶೈಲಪೀಠದ ಸೂಕ್ಷ್ಮಪರಿಚಯ

## ಈ ಪೀಠದ ಬಗ್ಗೆ ದೊರೆತಿರುವ ಕೆಲವು ಶಾಸನಗಳ ವಿಮರ್ಶೆ

---

## ಶ್ರೀಜಗದ್ಗುರುಪಂಚಪೀಠಗಳ ಪ್ರಾಚೀನತ್ವದಬಗ್ಗೆ ಮದ್ರಾಸ್ ಹೈಕೋರ್ಟಿನ ತೀರ್ಮಾನ

ಭರತಖಂಡದಲ್ಲಿರತಕ್ಕ ದ್ವಾದಶಜ್ಯೋತಿರ್ಲಿಂಗಗಳಲ್ಲಿ ಶ್ರೀಶೈಲ ಕ್ಷೇತ್ರದಲ್ಲಿರತಕ್ಕ ಶ್ರೀಮಲ್ಲಿಕಾರ್ಜುನ ಮಹಾಲಿಂಗವು ಒಂದಾಗಿರುವುದೆಂಬ ವಿಷಯವು ಶಾಸ್ತ್ರಪ್ರಸಿದ್ಧವೂ ಲೋಕಪ್ರಸಿದ್ಧವೂ ಆಗಿದೆ. ಈ ಮಲ್ಲಿಕಾರ್ಜುನ ಮಹಾಲಿಂಗದಿಂದ ವಿರಾಜಿಸುತ್ತಿರುವ ಶ್ರೀಶೈಲಕ್ಷೇತ್ರವು ಭರತಖಂಡದಲ್ಲಿರತಕ್ಕ ಸಮಸ್ತ ಪವಿತ್ರಕ್ಷೇತ್ರಗಳಲ್ಲಿ ಅಗ್ರಸ್ಥಾನವನ್ನು ಪಡೆದಿರುವುದು. ಆದುದರಿಂದಲೇ ಲೋಕವಿಖ್ಯಾತರಾದ ವ್ಯಾಸಮಹರ್ಷಿಗಳು "ಶ್ರೀಶೈಲಶಿಖರೇ ದೃಷ್ಟೇ ಪುನರ್ಜನ್ಮ ನ ವಿದ್ಯತೇ" ಎಂದು ತಮ್ಮಿಂದ ಬರೆಯಲ್ಪಟ್ಟಿರುವ ಸ್ಕಂದಪುರಾಣಾಂತರ್ಗತವಾದ ಶ್ರೀಶೈಲಖಂಡದಲ್ಲಿ ಈ ಮಹಾಕ್ಷೇತ್ರದ ಮಹಿಮೆಯನ್ನು ಉದ್ಘೋಷಿಸಿರುವರು. ಇಂತಹ ಪವಿತ್ರಕ್ಷೇತ್ರದಲ್ಲಿ ರಾರಾಜಿಸುತ್ತಿರುವ ಶ್ರೀಮಲ್ಲಿಕಾರ್ಜುನ ಮಹಾಲಿಂಗದಿಂದ ವೀರಶೈವಮತಸ್ಥಾಪಕರಾದ ಶ್ರೀಜಗದ್ಗುರು ಪಂಡಿತಾರಾಧ್ಯರು ಅವತರಿಸಿದರು. ಈ ವಿಷಯವನ್ನು ಸ್ವಾಯಂಭುವಾದಿಶಿವಾಗಮಗಳು ಮುಕ್ತಕಂಠದಿಂದ ಸಾರುತ್ತಿರುವವು.

ಸುಧಾಕುಂಡಾಖ್ಯಸುಕ್ಷೇತ್ರೇ ಮಲ್ಲಿಕಾರ್ಜುನಲಿಂಗತಃ ।
ಜನನಂ ಪಂಡಿತಾರ್ಯಸ್ಯ ನಿವಾಸಃ ಶ್ರೀಗಿರೌ ಶಿವೇ ॥
(ಸ್ವಾಯಂಭುವಾಗಮ)

ಇತ್ಯಾದಿ ಶಿವಾಗಮವಾಕ್ಯಗಳಿಂದ ಶ್ರೀಮತ್ಪಂಡಿತಾರಾಧ್ಯರು ಶ್ರೀಮಲ್ಲಿಕಾರ್ಜುನಲಿಂಗದಿಂದ ಅವತರಿಸಿ ಅಲ್ಲಿಯೇ ತಮ್ಮ ಧರ್ಮಪೀಠವನ್ನು ಸ್ಥಾಪಿಸಿದರೆಂದು ಸ್ಪಷ್ಟವಾಗುವದು. ಶ್ರೀಪಂಡಿತಾರಾಧ್ಯರ ಅವತಾರಕ್ಕೆ ಮೂಲಭೂತನಾದ ಶ್ರೀಮಲ್ಲಿಕಾರ್ಜುನಸ್ವಾಮಿಯ ದೇವಸ್ಥಾನವು ಅನಾದಿ ಕಾಲದಿಂದ ಆ ಪೀಠಾಧಿಪತಿಗಳ ಸ್ವಾಧೀನದಲ್ಲಿಯೇ ಇತ್ತು. ಆದರೆ ಮುಸಲ್ಮಾನರ ಹಾವಳಿಯ ಕಾಲದಲ್ಲಿ ಶ್ರೀಶೈಲಕ್ಷೇತ್ರವು ಪಾಳುಬಿದ್ದ ಕಾರಣ, ಅಂದಿನಿಂದ ಆ ಕ್ಷೇತ್ರದ ಆಧಿಪತ್ಯವು ಇವರ ಕೈಬಿಟ್ಟು ಹೋಯಿತು. ಆದರೂ ಶ್ರೀಮಲ್ಲಿಕಾರ್ಜುನಸ್ವಾಮಿಯ ಪೂಜಾದಿಗಳು ಇಂದಿನವರೆಗೂ ಜಂಗಮವಂಶೀಯರಿಂದಲೇ ನೆರವೇರಿಸಲ್ಪಡುತ್ತಿರುವವು.

ಶ್ರೀಶೈಲಕ್ಷೇತ್ರದ ಆಧಿಪತ್ಯವು ಪೂರ್ವಕಾಲದಲ್ಲಿ ಶ್ರೀಶೈಲಧರ್ಮಪೀಠಾಧಿಪತಿಗಳ ಅಧೀನದಲ್ಲಿದ್ದಿತೆಂಬ ವಿಷಯವನ್ನು ಅನಂತಪುರ ಡಿಸ್ಟ್ರಿಕ್ಟ್ ತಾಡಪತ್ರಿ ರಾಮೇಶ್ವರ ದೇವಾಲಯದಲ್ಲಿರುವ ಒಂದು ಶಿಲಾಶಾಸನವು ಸೂಚಿಸುತ್ತಿರುವುದು. ಈ ಶಾಸನವು ಆಂಧ್ರಭಾಷೆಯಲ್ಲಿದ್ದು "South Indian Inscriptions (Texts)" Vol. IV "ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್" ೪ ನೆಯ ಭಾಗದ ೨೭೧ ನೆಯ ಪುಟದಲ್ಲಿ ಮುದ್ರಿಸಲ್ಪಟ್ಟಿರುವುದು. ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. (A. R. No. 339 of 1892)

ಈ ಶಾಸನದಲ್ಲಿ ಶ್ರೀಶೈಲಪೀಠದ ಸಿದ್ಧಭಿಕ್ಷಾವೃತ್ತಿಸ್ವಾಮಿಗಳವರ ಆಜ್ಞಾಧಾರಕನಾದ "ಶಾಂತಯ್ಯ" ಎಂಬಾತನು ತಾಡಪತ್ರಿಯಲ್ಲಿರುವ ರಾಮೇಶ್ವರದೇವರಿಗೆ ದಾನಮಾಡಿರುವ ವಿಷಯವು ಹೇಳಲ್ಪಟ್ಟಿರುವುದು. ಈ ಶಾಸನದಲ್ಲಿ ಮೇಲ್ಕಂಡ ಶ್ರೀಸ್ವಾಮಿಗಳವರಿಗೆ ಕೊಡಲ್ಪಟ್ಟಿರುವ

ವಿಶೇಷಣಗಳನ್ನು ವಿಮರ್ಶಿಸಿದರೆ ಆ ಸ್ವಾಮಿಗಳವರು ದೇವಸ್ಥಾನದ ಧರ್ಮದರ್ಶಿಗಳಾಗಿದ್ದರೆಂದು ತೋರಿಬರುತ್ತದೆ.

ಮದ್ರಾಸ್ ಗವರ್ನಮೆಂಟಿನ ಶಾಸನ ಇಲಾಖೆಯವರಿಗೆ ೧೯೧೩ನೆಯ ಇಸ್ವಿಯಲ್ಲಿ ಕರ್ನೂಲ ಡಿ|| ಪಾಣೆಂ ಎಂಬ ಗ್ರಾಮದಲ್ಲಿ ಎರಡು ಶಿಲಾಶಾಸನಗಳು ದೊರೆತಿರುತ್ತವೆ. (ಶಾಸನಗಳ ನಂಬರು ೧೩೮-೧೩೯.)

೧೩೯ನೆಯ ನಂಬರಿನ ಶಾಸನದಲ್ಲಿ—ಶ್ರೀಪಂಡಿತಾರಾಧ್ಯರ ಪವಿತ್ರನಾಮವು ಉಲ್ಲೇಖಿಸಲ್ಪಟ್ಟಿರುತ್ತದೆ. ಆ ಶಾಸನದಲ್ಲಿರುವ ಸಂಸ್ಕೃತ ಪದ್ಯವು ಈ ಕೆಳಗೆ ಉದಾಹರಿಸಲ್ಪಟ್ಟಿರುವುದು.

ಶ್ರೀಯೋರುಗಂಟ್ಯಂತಿಕಮಾಚಿರಾಜು
ಪಲ್ಲೀಜನಿಃ ಶ್ರೀಗಿರಿಶೃಂಗವಾಸೀ ।
ಶ್ರೀಪಂಡಿತಾರಾಧ್ಯಗೃಹಸ್ಯ ದಾಸೋ
ವಿಭೂತಿಗೌರಃ ಶರಣಾಗತೋ ವಃ ॥

"ಯೋರುಗಂಟಿ ಎಂಬ ಗ್ರಾಮದ ಸಮೀಪದಲ್ಲಿರುವ ಮಾಚಿರಾಜುಪಲ್ಲಿಯಲ್ಲಿ ಹುಟ್ಟಿದವನೂ, ಶ್ರೀಶೈಲಪರ್ವತದ ಮೇಲ್ಭಾಗದಲ್ಲಿ ವಾಸವಾಗಿರುವವನೂ, ಶ್ರೀಪಂಡಿತಾರಾಧ್ಯರ ಮಠದ ಸೇವಕನೂ ಆದ ವಿಭೂತಿಗೌರಯ್ಯನು ನಿಮ್ಮಗಳಿಗೆ ಶರಣಾಗತನಾಗಿದ್ದಾನೆ." ಎಂಬುದು ಮೇಲಿನ ಪದ್ಯದ ಅರ್ಥ. ಈ ಶಾಸನದಲ್ಲಿ ಶ್ರೀಶೈಲಪಂಡಿತಾರಾಧ್ಯರ ನಾಮವು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುವುದು. ಆದರೆ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ.

೧೩೮ನೆಯ ನಂಬರಿನ ಶಾಸನವೂ ಸಹ ವಿಭೂತಿ ಗೌರಯ್ಯನ ವಿಷಯುಕವಾಗಿಯೇ ಇರುವುದು. ಆ ಶಾಸನದಲ್ಲಿ—

ದೇವರ ಬಾಯಿನ್ಸೇಳಿಕೊಪ್ಪೋನ್ಸಳ್ಳ ಪಡಿಯೂರನ್
ಶ್ರೀವಿಭೂತಿ ಗೌರಯ ಶರಣಾರ್ತಿ

ಈ ರೀತಿ ಅಕ್ಷರಗಳು ಕೆತ್ತಲ್ಪಟ್ಟಿರುವವು. ಮದ್ರಾಸ್ ಗವರ್ನಮೆಂಟಿನ ಶಾಸನ ಇಲಾಖೆಯವರು ಈ ಶಾಸನದಲ್ಲಿರುವ ಅಕ್ಷರಗಳು ಕ್ರಿಸ್ತಶಕ ೮ ನೆಯ ಶತಮಾನದವುಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯ ವನ್ನು ವಿಮರ್ಶಿಸಿ ನೋಡಿದರೆ ವಿಭೂತಿ ಗೌರಯ್ಯ ಎಂಬವನು ಈಗ್ಗೆ ೧೨೦೦ ವರ್ಷಗಳ ಪೂರ್ವದಲ್ಲಿದ್ದನೆಂದು ಸ್ಪಷ್ಟವಾಗುವದು. ಈಗ್ಗೆ ೧೨೦೦ ವರ್ಷಗಳ ಪೂರ್ವದ ಶಾಸನದಲ್ಲಿ ಶ್ರೀಪಂಡಿತಾರಾಧ್ಯಪೀಠದ ಪವಿತ್ರನಾಮವು ಉಲ್ಲಿಖಿತವಾಗಿರುವದನ್ನು ನೋಡಿದರೆ ಶ್ರೀಶೈಲಪೀಠವು ಬಹು ಪುರಾತನವಾದುದೆಂದು ಸ್ಪಷ್ಟವಾಗುವದು.

ಶ್ರೀಶೈಲಪೀಠಕ್ಕೆ ಪೂರ್ವಕಾಲದಲ್ಲಿ ಈಶ್ವರಶಿವಾಚಾರ್ಯ ರೆಂಬವರು ಅಧಿಪತಿಗಳಾಗಿದ್ದರೆಂಬ ವಿಷಯವು ಆ ಕ್ಷೇತ್ರದಲ್ಲಿರುವ ಒಂದು ಶಾಸನದಲ್ಲಿ ಹೇಳಲ್ಪಟ್ಟಿರುವದೆಂದು ಶ್ರೀಶೈಲಮ್ಯಾನೇಜ್‌ಮೆಂಟ್ ಬೋರ್ಡಿನವರು ಈಗ್ಗೆ ೧೫-೨೦ ವರ್ಷಗಳ ಪೂರ್ವದಲ್ಲಿ ತಮ್ಮ ರಿಪೋರ್ಟಿನಲ್ಲಿ ಪ್ರಕಟಿಸಿರುವರೆಂದು ತಿಳಿದುಬರುತ್ತದೆ. ಈ ಶಾಸನವನ್ನು ಪ್ರತ್ಯಕ್ಷವಾಗಿ ನೋಡಿದ ಮೇಲೆ ಅದರಲ್ಲಿರುವ ವಿಷಯವನ್ನು ಸರಿಯಾಗಿ ಪರಿಶೋಧಿಸಿ ಮುಂದೆ ವಿಮರ್ಶಿಸಲಾಗುವದು. ಈ ಪೀಠದ ಬಗ್ಗೆ ಆಂಧ್ರದೇಶದಲ್ಲಿ ಇನ್ನೂ ಅನೇಕ ಶಾಸನಗಳು ದೊರೆಯುವವು. ಶಾಸನ ಶೋಧಕದೃಷ್ಟಿಯುಳ್ಳವರು ಈ ಕಾರ್ಯವನ್ನು ಕೈಕೊಂಡರೆ ಈ ಪೀಠಕ್ಕೂ ವೀರಶೈವಸಮಾಜಕ್ಕೂ ಮಹೋಪಕಾರವನ್ನು ಮಾಡಿದಂತಾಗುವದು. ಅಸ್ತು!

ಶ್ರೀಶೈಲಕ್ಷೇತ್ರವು ಪೂರ್ವಕಾಲದಲ್ಲಿ ಈಗಿನಂತೆ ನಿರ್ಜನಪ್ರದೇಶ ವಾಗಿರದೆ, ಅಸಂಖ್ಯ ಜನಸಮೂಹದಿಂದ ವಿರಾಜಿಸುತ್ತಿದ್ದಿತು. ಆಂಧ್ರ ದೇಶದಲ್ಲಿರುವ ಓರಂಗಲ್ಲನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಕಾಕತೀಯವಂಶದ ಗಣಪತಿರಾಜನ ಕಾಲದಲ್ಲಿಯೂ, ಅವನ ಮಗಳಾದ ರುದ್ರಾಂಬೆಯ ಕಾಲದಲ್ಲಿಯೂ ಈ ಮಹಾಕ್ಷೇತ್ರವು ಜನಭರಿತವಾಗಿ ಒಳ್ಳೆ

ವೈಭವಸ್ಥಿತಿಯಲ್ಲಿತ್ತು. ಮಹಾಶೂರೆಯಾದ ರುದ್ರಾಂಬೆಯು ಮೃತಳಾದ ಮೇಲೆ ಅವಳ ಮಗಳ ಮಗನಾದ ಪ್ರತಾಪರುದ್ರನೆಂಬವನು ಆ ದೇಶವನ್ನು ಆಳಹತ್ತಿದನು. ಹೇಡಿಯೂ ಹತಭಾಗ್ಯನೂ ಆದ ಆ ಪ್ರತಾಪರುದ್ರನ ಕಾಲದಲ್ಲಿ ದಿಲ್ಲಿಯಿಂದ ಮಲ್ಲಿಕ್‌ಕಾಫರನೆಂಬವನು ದಕ್ಷಿಣದೇಶಕ್ಕೆ ದಂಡೆತ್ತಿ ಬಂದು ಆವನನ್ನು ಯುದ್ಧದಲ್ಲಿ ಸೋಲಿಸಿ, ಅವನ ಬೊಕ್ಕಸವನ್ನೆಲ್ಲಾ ಲೂಟಿಮಾಡಿ, ಕ್ರಿ. ಶ. ೧೩೨೩ ರಲ್ಲಿ ಅವನನ್ನು ಸೆರೆಹಿಡಿದು ದಿಲ್ಲಿಗೆ ಒಯ್ದನು. ಪ್ರತಾಪರುದ್ರನು ಸೆರೆಸಿಕ್ಕ ಮೇಲೆ ಆ ರಾಜ್ಯವು ಅನಾಯಕ ವಾಗಿ, ಆ ರಾಜವಂಶದವರಿಗೆ ಕುಲದೈವವಾಗಿದ್ದ ಶ್ರೀಮಲ್ಲಿಕಾರ್ಜುನ ಸ್ವಾಮಿಯ ದೇವಸ್ಥಾನದ ವೈಭವವು ತಗ್ಗಿಹೋಯಿತು. ಮುಸಲ್ಮಾನರ ಹಾವಳಿಯಿಂದ ಆ ಕ್ಷೇತ್ರದಲ್ಲಿದ್ದ ಅಸಂಖ್ಯ ಜನ ಹಿಂದೂಗಳು ಆ ಸ್ಥಾನವನ್ನು ಬಿಟ್ಟು ದಿಕ್ಕುಪಾಲಾಗಿ ಓಡಿಹೋದರು. ಆ ಕಾಲದಲ್ಲಿಯೇ ಶ್ರೀಶೈಲಕ್ಷೇತ್ರದಲ್ಲಿದ್ದ ವೀರಶೈವಧರ್ಮಪೀಠವು ಸಹ ಪಾಳುಬಿದ್ದಿತು. ಅಂದಿನಿಂದೀಚೆಗೆ ಆ ಪೀಠಾಧಿಪತಿಗಳು ಶ್ರೀಶೈಲಕ್ಕೆ ಸಮೀಪದಲ್ಲಿರುವ ಆತ್ಮಕೂರು ಎಂಬ ಗ್ರಾಮದಲ್ಲಿ ಬೇರೊಂದು ಮಠವನ್ನು ಕಟ್ಟಿಸಿಕೊಂಡು ವಾಸಿಸತೊಡಗಿದರು.

ಈ ಆತ್ಮಕೂರು ಮಠದ ಬಗ್ಗೆ ಇತ್ತೀಚೆಗೆ ಆ ಮಠದ ಸ್ವಾಮಿಗಳವ ರಲ್ಲಿ ಪರಸ್ಪರ ವ್ಯಾಜ್ಯವು ಹುಟ್ಟಿ, ಆ ವ್ಯಾಜ್ಯವು ಮದ್ರಾಸ್ ಹೈಕೋರ್ಟಿನ ವರೆಗೆ ಹೋಯಿತು. ಮದ್ರಾಸ್ ಹೈಕೋರ್ಟಿನ ಚೀಫ್ ಜಸ್ಟಿಸ್ ಸರ್. ಆಲ್ಫಿರ್ಡ್ ಹೆನ್ರಿ ಎಂಬವರು ಆ ಪೀಠದ ಮತ್ತು ಮಿಕ್ಕ ನಾಲ್ಕು ಪೀಠಗಳ ಪ್ರಾಚೀನ ಚರಿತ್ರವನ್ನು ಕೂಲಂಕಷವಾಗಿ ಪರಿಶೀಲಿಸಿ ತಾ|| ೨-೩-೧೯೪೪ ನೆಯ ದಿವಸ ತೀರ್ಮಾನವನ್ನಿತ್ತರು. ಹೈಕೋರ್ಟಿನ ಶ್ರೇಷ್ಠನ್ಯಾಯಾಧೀಶರು ತಮ್ಮ ತೀರ್ಮಾನದ ಒಂದು ಕಡೆಯಲ್ಲಿ ಪಂಚ ಪೀಠಗಳು ಬಹುಪುರಾತನವಾದವುಗಳೆಂದು ಸ್ಪಷ್ಟಪಡಿಸಿರುತ್ತಾರೆ. ಅವರು ತಮ್ಮ ಜಡ್ಜಮೆಂಟಿನಲ್ಲಿ ಬರೆದಿರುವ ವಿಷಯವು ಈ ಮುಂದೆ ಉದಾಹರಿ ಸಲ್ಪಟ್ಟಿರುವದು.

## ಮದ್ರಾಸ್ ಹೈಕೋರ್ಟಿನ ಜಡ್ಜ್‌ಮೆಂಟ್

# IN THE HIGH COURT OF MADRAS

*Thursday 2nd March 1944*

**Present**

**The Honourable Sir Alfred Henry Leonel Leach Chief Justice and Shahabuddin**

*Letters Patent Appeal No. 18/1941.*

**Judgment of the Court was delivered by the Honourable the Chief Justice.**

" The appellant claims to be the sole heir of a Math at Atmakoor in the Karnool District called the Giriraj Surya Simhasana Math. It is one of **the five ancient Maths** instituted for the benefit of a seat of worshippers of Shiva known as Lingayats. The other Maths are situated in various parts of India. When they were founded, is not known but it is accepted that they are all of ancient origin,"

## ಜಡ್ಜ್‌ಮೆಂಟಿನ ಅಭಿಪ್ರಾಯ

" ಕರ್ನೂಲ್ ಡಿಸ್ಟ್ರಿಕ್ ಆತ್ಮಕೂರಿನಲ್ಲಿರುವ ಶ್ರೀಗಿರಿರಾಜಸೂರ್ಯ ಸಿಂಹಾಸನಮಠಕ್ಕೆ ಅಪೀಲ್‌ವಾದಿಗಳು ತಾವೊಬ್ಬರೇ ಹಕ್ಕುದಾರರೆಂಬು

ವಾಗಿ ಹೇಳುತ್ತಾರೆ. ಶಿವನನ್ನು ಆರಾಧಿಸುವ ವೀರಶೈವ ಸಮಾಜದ ಉಪಕಾರಕ್ಕೋಸ್ಕರ ಸ್ಥಾಪಿಸಲ್ಪಟ್ಟಿರತಕ್ಕ ಐದು ಪುರಾತನ ಮಠಗಳಲ್ಲಿ ಇದೂ ಒಂದಾಗಿದೆ. ಇತರ ಮಠಗಳು ಇಂಡಿಯಾ ದೇಶದ ಇತರ ಕಡೆಗಳಲ್ಲಿರುತ್ತವೆ. ಈ ಮಠಗಳು ಯಾವಾಗ ಸ್ಥಾಪಿಸಲ್ಪಟ್ಟವೆಂಬುದು ತಿಳಿಯದಾದರೂ, ಇವುಗಳು ಬಹು ಪುರಾತನ ಮಠಗಳೆಂದು ಒಪ್ಪಲ್ಪಟ್ಟವೆ.''

ಈ ರೀತಿಯಾಗಿ ಮದ್ರಾಸ್ ಹೈಕೋರ್ಟಿನವರು ಜಡ್ಜ್‌ಮೆಂಟ್ ಬರೆದು ಪಂಚಪೀಠಗಳ ಪ್ರಾಚೀನತ್ವವನ್ನು ಸ್ಪಷ್ಟಪಡಿಸಿದ್ದಾರೆ. ಹೈಕೋರ್ಟಿನವರ ಈ ವಿಧವಾದ ತೀರ್ಮಾನವು ಪಂಚಪೀಠಗಳಿಗೂ, ವೀರಶೈವ ಸಮಾಜಕ್ಕೂ ಮಹಾಭೂಷಣಪ್ರದವಾಗಿರುವುದೆಂಬುದನ್ನು ಅತ್ಯಾನಂದದಿಂದ ಹೇಳಬೇಕಾಗಿದೆ.

ಅಸಾಧಾರಣಧರ್ಮಾಭಿಮಾನಿಗಳಾದ ಶ್ರೀಮಾನ್ ಪಿ. ಆಯ್. ಹಿರೇಮಠ ಹರಕುಣಿ ಹೈಕೋರ್ಟ ವಕೀಲ ಹುಬ್ಬಳ್ಳಿ ಇವರು ಇಲ್ಲಿ ಮುದ್ರಿಸಿರುವ ಜಡ್ಜ್‌ಮೆಂಟಿನ ವಿಷಯವನ್ನು ಕಳುಹಿಸಿಕೊಟ್ಟು ಜಗದಾಚಾರ್ಯರ ಕೃಪೆಗೆ ಪಾತ್ರರಾಗಿರುತ್ತಾರೆ.

॥ ಶಿವಂ ಭೂಯಾತ್ ॥



# ಶ್ರೀರೇಣುಕಾಚಾರ್ಯರು ಮತ್ತು ಶ್ರೀಶಂಕರಾಚಾರ್ಯರು



ಅದ್ವೈತಮತಸ್ಥಾಪಕರೆಂದು ಲೋಕವಿಖ್ಯಾತರಾಗಿರುವ ಶ್ರೀ ಶಂಕರಾಚಾರ್ಯರಿಂದ ಸ್ಥಾಪಿತವಾದ ಶೃಂಗೇರಿ ಮಠದಲ್ಲಿ ಬಹು ಪುರಾತನ ಕಾಲದಿಂದ ಈವರೆಗೂ ಶ್ರೀಚಂದ್ರಮೌಲೀಶ್ವರಲಿಂಗವು ಅಗ್ರಸ್ಥಾನವನ್ನು ಪಡೆದು ಪೂಜಿಸಲ್ಪಡುತ್ತಿರುವ ವಿಷಯವು ಪ್ರತಿಯೊಬ್ಬರಿಗೂ ತಿಳಿದೇ ಇದೆ. ಮಹಿಮಾನ್ವಿತವಾದೀ ಲಿಂಗವು ಆದ್ಯಶಂಕರಾಚಾರ್ಯರಿಗೆ ಶ್ರೀರೇಣುಕಾ ಚಾರ್ಯರಿಂದ ಅನುಗ್ರಹಿಸಲ್ಪಟ್ಟಿತೆಂಬ ವಿಷಯವು ಜಗತ್ಪ್ರಸಿದ್ಧವೇ ಇದೆ. ಈ ವಿಷಯವನ್ನು ಅನೇಕ ಪ್ರಾಚೀನ ಗ್ರಂಥಗಳು ಮುಕ್ತಕಂಠದಿಂದ ಸಾರುತ್ತಿರುವವು.

ಶ್ರೀಸಿದ್ಧನಾಥಶಿವಾಚಾರ್ಯರಿಂದ ರಚಿಸಲ್ಪಟ್ಟಿರುವ ರೇಣುಕವಿಜಯ ಗ್ರಂಥದಲ್ಲಿ ಶ್ರೀಚಂದ್ರಮೌಲೀಶ್ವರಲಿಂಗಪ್ರದಾನವಿಷಯವು ವಿಶದವಾಗಿ ಬರೆಯಲ್ಪಟ್ಟಿರುವದು. ಹಾಗೂ ಈ ವಿಷಯವು ಶಿವತತ್ತ್ವರತ್ನಾಕರ, ವೇದಾಂತಸಾರವೀರಶೈವಚಿಂತಾಮಣಿ ಮೊದಲಾದ ಗ್ರಂಥಗಳಲ್ಲಿಯೂ ಸಹ ಪ್ರತಿಪಾದಿಸಲ್ಪಟ್ಟಿರುವದು. ಅಲ್ಲದೆ ಈಗ್ಗೆ ನೂರಾರು ವರ್ಷಗಳ ಪೂರ್ವದಲ್ಲಿ ಶ್ರೀಶೃಂಗೇರಿಮಠಕ್ಕೆ ಅಧಿಪತಿಗಳಾಗಿದ್ದ ಸಚ್ಚಿದಾನಂದ ಭಾರತೀಸ್ವಾಮಿಗಳೆಂಬ ಮಹನೀಯರು ಆ ಕಾಲದಲ್ಲಿ ತಮ್ಮ ಆಸ್ಥಾನ ವಿದ್ವಾಂಸರಾಗಿದ್ದ ಕಾಶೀಲಕ್ಷ್ಮಣಶಾಸ್ತ್ರಿಗಳೆಂಬ ಕವಿಪುಂಗವರಿಂದ ಆದ್ಯ ಶಂಕರಾಚಾರ್ಯರಾದಿಯಾಗಿ ಸಕಲ ಸ್ವಾಮಿಗಳವರ ಚರಿತ್ರವನ್ನು "ಗುರು ವಂಶಕಾವ್ಯ" ಎಂಬ ಹೆಸರಿನಿಂದ ಸಂಸ್ಕೃತಭಾಷೆಯಲ್ಲಿ ಪದ್ಯರೂಪವಾಗಿ ಬರೆಯಿಸಿದ್ದಾರೆ. ಈ ಗ್ರಂಥವು ಶೃಂಗೇರಿಮಠದ ಲೈಬ್ರರಿಯಲ್ಲಿ

ದೊರೆತಿದ್ದು, ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನಧರ್ಮಾಧಿಕಾರಿ ಗಳಾಗಿದ್ದ ವಿದ್ಯಾವಿಶಾರದ ಕೈ॥ ಕುಣಿಗಲ ರಾಮಶಾಸ್ತ್ರಿಗಳವರಿಂದ ಪರಿಶೋಧಿತವಾಗಿ, ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ಶ್ರೀರಂಗದಲ್ಲಿರುವ ವಾಣೀವಿಲಾಸಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿದೆ. ಈ ಗ್ರಂಥದ ಮೂರನೆಯ ಸರ್ಗದಲ್ಲಿ—

ಶ್ರೀಶಂಕರಾಚಾರ್ಯರು ಭರತಖಂಡವನ್ನೆಲ್ಲ ಸಂಚರಿಸಿ ಕಾಶ್ಮೀರ ದೇಶಕ್ಕೆ ಹೋಗಿ, ಅಲ್ಲಿದ್ದ ಶಾರದಾದೇವಿಯನ್ನು ತಂದು ಶೃಂಗೇರಿಯಲ್ಲಿ ಸ್ಥಾಪಿಸಿದರೆಂದೂ, ಅನಂತರ ತಾವು ಕಾಂಚೀಕ್ಷೇತ್ರಕ್ಕೆ ಹೊರಡಲು ಸಿದ್ಧರಾಗಿ ಸುರೇಶ್ವರಾಚಾರ್ಯನೆಂಬ ತಮ್ಮ ಪ್ರಥಮಶಿಷ್ಯನಿಗೆ ಶೃಂಗೇರಿ ಮಠದ ಪಟ್ಟವನ್ನು ಕಟ್ಟಿದರೆಂದೂ, ಆಮೇಲೆ ಸುರೇಶ್ವರಾಚಾರ್ಯನಿಗೆ-“ ಎಲೈ ಸುರೇಶ್ವರಾಚಾರ್ಯನೇ! ನೀನು ಶ್ರೀರೇಣುಕಾಚಾರ್ಯರು ನನಗೆ ಈ ಮೊದಲು ಅನುಗ್ರಹಿಸಿರುವ ಶ್ರೀಚಂದ್ರಮೌಳೀಶ್ವರಲಿಂಗ ವನ್ನೂ ಹಾಗೂ ರತ್ನಗರ್ಭಗಣಪತಿಯನ್ನೂ ಪೂಜಿಸು” ಎಂದು ಆಜ್ಞೆ ಯನ್ನು ಮಾಡಿ ಕಾಂಚೀಕ್ಷೇತ್ರಕ್ಕೆ ತೆರಳಿದರೆಂದೂ ಇತ್ಯಾದಿ ವಿಷಯವು ಬರೆಯಲ್ಪಟ್ಟಿರುತ್ತದೆ. ಆ ಗ್ರಂಥದಲ್ಲಿರುವ ಶ್ಲೋಕಗಳು ಈ ಮುಂದೆ ಉದಾಹರಿಸಲ್ಪಟ್ಟಿವೆ.

ಶ್ರೀಚಂದ್ರಮೌಳೀಶ್ವರಲಿಂಗಮಸ್ಮೈ ।
ಸದ್ರತ್ನಗರ್ಭಂ ಗಣನಾಯಕಂ ಚ ॥
ಸ ವಿಶ್ವರೂಪಾಯ ಸುಸಿದ್ಧದತ್ತಂ ।
ದತ್ವಾ ನ್ಯಗಾದೀಚ್ಚಿರಮರ್ಚಯೇತಿ ॥೩೩॥

ಸುರೇಶ್ವರಾಚಾರ್ಯ ಸರಸ್ವತೀಂ ತ್ವಂ ।
ಸಂಪೂಜಯನ್ನಾಸ್ಸ್ವ ಚಿರಾದಿಹೇತಿ ॥
ದತ್ವಾಽಭ್ಯನುಜ್ಞಾಂ ವಿನತಾಯ ತಸ್ಮೈ ।
ಶಿಷ್ಯೈಸ್ಸಮಸ್ತೈಸ್ಸ ಜಗಾಮ ಕಾಂಚೀಂ ॥೩೪॥

ಮೇಲಿನ ಪದ್ಯದಲ್ಲಿರತಕ್ಕ "ಸುಸಿದ್ಧದತ್ತಂ" ಎಂಬ ಪದಕ್ಕೆ—

"ಸುಸಿದ್ಧೇನ ರೇವಣಸಿದ್ಧಮಹಾಯೋಗಿನಾ ದತ್ತಂ ಶ್ರೀಚಂದ್ರಮೌಲೀಶ್ವರಲಿಂಗಂ ಸದ್ರತ್ನಗರ್ಭಂ ಸದ್ರತ್ನಂ ಮಾಣಿಕ್ಯಂ ಗರ್ಭೇ ಯಸ್ಯ ಸಃ ತಥೋಕ್ತಸ್ತಂ ಗಣನಾಯಕಂ ಚ"

ಎಂದು ಈ ಗ್ರಂಥವನ್ನು ರಚಿಸಿದ ಕವಿಗಳೇ ಸಂಸ್ಕೃತದಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾರೆ. ಅಲ್ಲದೆ ಈ ಚಂದ್ರಮೌಲೀಶ್ವರಲಿಂಗದ ವಿಷಯವು ಇದೇ ಕಾವ್ಯದ ಆರನೆಯ ಸರ್ಗದಲ್ಲಿಯೂ ಬಂದಿರುವದು. ಈ ಗ್ರಂಥಕರ್ತರು ಗ್ರಂಥಾದಿಯಲ್ಲಿ—

ಪ್ರಾಯೇಣಾನ್ವಯಮಾರ್ಗೇಣ ವ್ಯಾಖ್ಯಾಯತ ಇಯಂ ಕೃತಿಃ ।
ಪ್ರಾಚಾಮುಸಮ್ಮತಂ ನೈವ ಲಿಖ್ಯತೇಽತ್ರ ನ ಚಾಧಿಕಂ ॥

ಎಂದು ಪ್ರತಿಜ್ಞೆಯನ್ನು ಮಾಡಿ, ಪ್ರಾಚೀನಗ್ರಂಥಗಳಿಗೆ ಸಮ್ಮತವಾದ ಯಥಾರ್ಥವಿಷಯವನ್ನೇ ಬರೆಯುತ್ತೇನೆಂದು ಅಂದುಕೊಂಡಿರುವುದರಿಂದ, ಶ್ರೀಶಂಕರಾಚಾರ್ಯರ ವಿಷಯಕವಾಗಿರುವ ಪ್ರಾಚೀನಗ್ರಂಥಗಳಲ್ಲಿ ಚಂದ್ರಮೌಲೀಶ್ವರಲಿಂಗಪ್ರದಾನವಿಷಯವು ವಿಶದವಾಗಿ ಬರೆಯಲ್ಪಟ್ಟಿರಬಹುದೆಂದು ತೋರಿಬರುತ್ತದೆ.

ಮದ್ರಾಸ್ ಗೌರ್ನಮೆಂಟ್ ಸೀನಿಯರ್ ಟ್ರಾನ್ಸ್‌ಲೇಟರರಾದ ಮ॥ ರಾ॥ ಬಿ. ರಾಮರಾವ್ ಎಂ.ಎ., ಎಲ್‌ಎಲ್.ಬಿ., ಇವರು ಮತ್ತು ಮದ್ರಾಸ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರೆರಿಯನ್ನರಾದ ಮ॥ ರಾ॥ ವಿದ್ವಾನ್ ಪಿ. ಸುಂದರಶಾಸ್ತ್ರಿಯರ್ ಇವರು "ಶಿವತತ್ತ್ವ ರತ್ನಾಕರ" ಎಂಬ ಉದ್ಗ್ರಂಥವನ್ನು ದೇವನಾಗರೀಲಿಪಿಯಲ್ಲಿ ಮುದ್ರಣಮಾಡಿಸಿ, ಮೈಸೂರು ಶ್ರೀಮನ್ಮಹಾರಾಜಾಧಿರಾಜ ದಿವಂಗತ ನಾಲ್ಮಡಿ ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರವರ ಸನ್ನಿಧಿಗೆ ಸಮರ್ಪಿಸಿದ್ದಾರೆ. ಈ ಗ್ರಂಥದ

ನಾಲ್ಕನೆಯ ಕಲ್ಲೋಲದ ಹನ್ನೆರಡನೆಯ ತರಂಗದಲ್ಲಿ ವಿದ್ಯಾರಣ್ಯರ ವಿಷಯವನ್ನು ಬರೆಯುವಾಗ್ಗೆ—

ತತಃ ಸ ರೇವಣಾಸಿದ್ಧಸಂಪ್ರದಾಯಪ್ರವರ್ತಿನಾಂ ।
ಶಂಕರಾಚಾರ್ಯವರ್ಯಾಣಾಂ ಪಾರಂಪರ್ಯಕ್ರಮಾಗತಂ ॥೯॥
ಸನ್ಯಾಸಿನಮುಪಾಶ್ರಿತ್ಯ ವಿನಯಾವನತೋಽಧಿಕಂ ।
ವೃತ್ತಾಂತಮಖಿಲಂ ತಸ್ಮೈಯತಯೇ ಸ್ವಂ ವ್ಯಜಿಜ್ಞಪತ್ ॥೧೦॥

ಎಂದೂ,

ರೇವಣಾಸಿದ್ಧಸಂಪ್ರಾಪ್ತಂ ಚಂದ್ರಮೌಲೀಶಮುಪ್ಯದಾತ್ ।
ಆಖ್ಯಚ್ಚಾನೇನ ಲಿಂಗೇನ ತವಾಭೀಷ್ಟಾಪ್ತಿರಿತ್ಯಪಿ ॥

ಎಂದೂ ಬರೆಯಲ್ಪಟ್ಟಿದೆ. ಈ ೧೨ ನೆಯ ತರಂಗದಿಂದ ತಿಳಿದುಬರುವದೇನೆಂದರೆ—ಶಿವಧರ್ಮನೆಂಬ ಬ್ರಾಹ್ಮಣನು ಬಡತನದ ವ್ಯಸನದಿಂದ ರೇವಣಸಿದ್ಧಸಾಂಪ್ರದಾಯಿಕರಾದ ಶ್ರೀ ಶಂಕರಾಚಾರ್ಯರ ಮಠಕ್ಕೆ ಅಧಿಪತಿಗಳಾಗಿದ್ದ ವಿದ್ಯಾಶಂಕರತೀರ್ಥಸ್ವಾಮಿಗಳವರಲ್ಲಿ ಬಂದು ತನ್ನ ನಿಜಸ್ಥಿತಿಯನ್ನು ಹೇಳಿಕೊಂಡನೆಂದೂ, ಶ್ರೀಸ್ವಾಮಿಗಳವರು ಅವನಿಗೆ ಶ್ರೀಚಕ್ರವನ್ನಾಶೀರ್ವದಿಸಿ ಅದನ್ನು ಪೂಜಿಸಲು ಅಪ್ಪಣೆಯನ್ನು ಮಾಡಿದರೆಂದೂ, ಆ ಶ್ರೀಚಕ್ರಪೂಜೆಯ ಸಾಮರ್ಥ್ಯದಿಂದಲೇ ಅವನು ಮಹಾಜ್ಞಾನಿಯಾಗಿ ಆ ಸ್ವಾಮಿಗಳವರಿಂದಲೇ ಸನ್ಯಾಸದೀಕ್ಷೆಯನ್ನು ಪಡೆದುಕೊಂಡು ವಿದ್ಯಾರಣ್ಯನೆಂಬ ನಾಮಧೇಯದಿಂದ ಪ್ರಸಿದ್ಧನಾದನೆಂದೂ, ಶ್ರೀ ಸ್ವಾಮಿಗಳವರು ತಮ್ಮ ಶಿಷ್ಯರಾದ ಆ ವಿದ್ಯಾರಣ್ಯರಿಗೆ, ಆದಿಯಲ್ಲಿ ಶ್ರೀರೇಣುಕಾಚಾರ್ಯರಿಂದ ಶ್ರೀಶಂಕರಾಚಾರ್ಯರಿಗೆ ಪ್ರಾಪ್ತವಾಗಿದ್ದ, ಗುರುಪರಂಪರೆಯಿಂದ ಬಂದ ಶ್ರೀಚಂದ್ರಮೌಲೀಶ್ವರಲಿಂಗವನ್ನು ಕೊಟ್ಟು, "ನೀನು ಈ ಲಿಂಗವನ್ನು ಪೂಜಿಸು; ಇದರಿಂದ ನಿನ್ನ ಮನೋಭೀಷ್ಟವು ಪೂರ್ತಿಯಾಗುವದು." ಎಂದು ಆಜ್ಞೆಯನ್ನಿತ್ತರೆಂದೂ ತಿಳಿದುಬರುತ್ತದೆ.



ಶ್ರೀಜಗದ್ಗುರು ರೇಣುಕಾಚಾರ್ಯರು ಶ್ರೀಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗವನ್ನು ಅನುಗ್ರಹಿಸುವರು.

ಮೇಲ್ಕಂಡ ಶಿವತತ್ತ್ವರತ್ನಾಕರ-ಗ್ರಂಥಕ್ಕೆ ಪೂರ್ವದಲ್ಲಿ ಇಂಡಿಯಾ ಗೌರ್ನಮೆಂಟಿನ ಪ್ರಾಚೀನಶಾಸನಶೋಧಕರಾಗಿದ್ದ ಕೈ॥ ರಾವ್‌ಬಹದ್ದೂರ್ ಎಚ್. ಕೃಷ್ಣಶಾಸ್ತ್ರಿಯರ್, ಬಿ.ಎ., ಎಂಬವರು ಆಂಗ್ಲಭಾಷೆಯಲ್ಲಿ ಬಹುವಿಶಾಲವಾದ ಪ್ರಸ್ತಾವನೆಯನ್ನು ಬರೆದಿರುತ್ತಾರೆ. ಅವರು ತಮ್ಮ ಪ್ರಸ್ತಾವನೆಯ ಒಂದು ಕಡೆಯಲ್ಲಿ ಈ ರೀತಿಯಾಗಿ ಬರೆದಿದ್ದಾರೆ—

One very interesting point which must be particularly drawn attention to in the story of Vidyaranya as given in the 12th Taranga of the 4th Kollola, is the "ರೇವಣಸಿದ್ಧಸಂಪ್ರದಾಯ" which the Acharyas of the Shankaracharya line that initiated our ವಿದ್ಯಾರಣ್ಯ were then practising at Sringeri. The ಲಿಂಗ of ಚಂದ್ರಮೌಳೀಶ್ವರ which is still worshipped as the chief deity by the Acharyas of ಶೃಂಗೇರಿಮಠ, is also said to have been presented to ವಿದ್ಯಾರಣ್ಯ by his direct guru. ರೇವಣಸಿದ್ಧ, we know, is a well known Saiva teacher, whom the Veerasaivas still claim as one of their earliest Acharyas. The Keladi chiefs who were mostly followers of the Veerasaiva religion, were devout adherents of the ಶೃಂಗೇರಿ ಶಂಕರಾಚಾರ್ಯಮಠ, perhaps also for the same reason, viz., that the Shankaracharyas were followers of the ರೇವಣಸಿದ್ಧಸಂಪ್ರದಾಯ. This explains perhaps why in the ಅದ್ವೈತಮಠ of ಶೃಂಗೇರಿ there is still a greater bias towards Shaivism and Shiva worship than towards

Vaishnavism and Krishna worship, though the founder, the great Shankaracharya was no respector of creeds nor of any distinction between ಶಿವ and ವಿಷ್ಣು"

"ಅಂದರೆ ಈ ಗ್ರಂಥದ 4 ನೆಯ ಕಲ್ಲೋಲದ 12 ನೆಯ ತರಂಗದಲ್ಲಿರುವ ವಿದ್ಯಾರಣ್ಯರ ಚರಿತ್ರದಲ್ಲಿ, ವಿದ್ಯಾರಣ್ಯರಿಗೆ ಸನ್ಯಾಸವನ್ನಿತ್ತ ಶಂಕರಾಚಾರ್ಯರ ಪೀಠಾಧಿಪತಿಗಳಾಗಿದ್ದ ಆಚಾರ್ಯರು, ರೇವಣಸಿದ್ಧ ಸಂಪ್ರದಾಯವನ್ನು ಅನುಸರಿಸುತ್ತಿದ್ದರೆಂಬ ವಿಷಯವು ಸರ್ವರಿಂದಲೂ ಅತ್ಯವಶ್ಯವಾಗಿ ನೋಡಲ್ಪಡತಕ್ಕದ್ದಾಗಿದೆ. ಶೃಂಗೇರಿಮಠದಲ್ಲಿ ಇಂದಿನವರೆಗೂ ಆ ಮಠದ ಆಚಾರ್ಯರಿಂದ ಮುಖ್ಯೋಪಾಸ್ಯದೇವರಾಗಿ ಪೂಜಿಸಲ್ಪಡುತ್ತಿರುವ ಶ್ರೀಚಂದ್ರಮೌಳೀಶ್ವರಲಿಂಗವು ವಿದ್ಯಾರಣ್ಯರಿಗೆ ಅವರ ಗುರುಗಳಿಂದ ಕೊಡಲ್ಪಟ್ಟಿತೆಂದು ಹೇಳಿದೆ. ಶ್ರೀರೇವಣಸಿದ್ಧರು ಪ್ರಸಿದ್ಧರಾದ ಶೈವಸಿದ್ಧಾಂತಸ್ಥಾಪಕರಾಗಿದ್ದಾರೆ. ಅವರನ್ನು ವೀರಶೈವರು ತಮ್ಮ ಮತದ ಅತ್ಯಂತ ಪ್ರಾಚೀನಾಚಾರ್ಯರಲ್ಲೊಬ್ಬರನ್ನಾಗಿ ಹೇಳುತ್ತಾರೆ. ಶಂಕರಾಚಾರ್ಯರು ರೇವಣಸಿದ್ಧಸಂಪ್ರದಾಯಕ್ಕೆ ಸೇರಿದವರಾದುದರಿಂದಲೇ ವೀರಶೈವಮತಾನುಯಾಯಿಗಳಾದ ಕೆಳದಿರಾಜರು ಶೃಂಗೇರಿ ಶಂಕರಾಚಾರ್ಯರ ಮಠಕ್ಕೆ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಿದ್ದರು. ಶಂಕರಾಚಾರ್ಯರು ಶಿವವಿಷ್ಣುದೇವತೆಗಳಲ್ಲಿ ಭೇದವನ್ನೆಣಿಸದಿದ್ದರೂ, ಇಂದಿಗೂ ಸಹ ಅದ್ವೈತಮತಕ್ಕೆ ಸೇರಿರುವ ಆ ಮಠದಲ್ಲಿ ವೈಷ್ಣವಮತ, ವಿಷ್ಣುಪೂಜೆ ಇವುಗಳಿಗಿಂತ, ಶೈವಮತ, ಶಿವಲಿಂಗಪೂಜೆ ಇವುಗಳಿಗೇ ಹೆಚ್ಚು ಪ್ರಾಶಸ್ತ್ಯವಿರುವದು ಈ ಕಾರಣದಿಂದಲೇ ಎಂದು ಕಂಡುಬರುತ್ತದೆ." ಎಂಬುದು ಇಂಗ್ಲಿಷ್ ಲೇಖನದ ಅಭಿಪ್ರಾಯ.

ಈ ಶಿವತತ್ತ್ವರತ್ನಾಕರ ಗ್ರಂಥಕಾರನು ಶ್ರೀರೇಣುಕಾಚಾರ್ಯರು ಶ್ರೀಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗವನ್ನನುಗ್ರಹಿಸಿದ ವಿಷ

ಯವನ್ನು, ವಿದ್ಯಾರಣ್ಯರಿಂದ ವಿರಚಿತವಾದ "ಪಿತಾಮಹಸಂಹಿತೆ" ಮತ್ತು ಭಾರತೀಕೃಷ್ಣಯತಿಯಿಂದ ವಿರಚಿತವಾದ "ವಿದ್ಯಾರಣ್ಯಕೃತಿ" ಎಂಬೀ ಗ್ರಂಥಗಳ ಆಧಾರದ ಮೇಲೆ ಬರೆದಿರುವೆನೆಂದು ಚತುರ್ಥಕಲ್ಲೋಲದ ಅಂತ್ಯದಲ್ಲಿ—

ವಿದ್ಯಾರಣ್ಯಕೃತಿಂ ಚೈವ ಪಿತಾಮಹಸುಸಂಹಿತಾಂ ।
ವಿಲೋಕ್ಯಾಯಂ ವಿರಚಿತಃ ಕಲ್ಲೋಲೋಽಭೂಚ್ಚತುರ್ಥಕಃ ॥

ಎಂದು ಬರೆದಿದ್ದಾನೆ. ಇದರ ಮೇಲಿಂದ ವಿದ್ಯಾರಣ್ಯರು ಬರೆದ ಪಿತಾಮಹಸಂಹಿತೆಯಲ್ಲಿಯೂ ಮತ್ತು ಭಾರತೀಕೃಷ್ಣಯತಿಯು ಬರೆದ ವಿದ್ಯಾರಣ್ಯಕೃತಿಯಲ್ಲಿಯೂ ಚಂದ್ರಮೌಳೀಶ್ವರಲಿಂಗಪ್ರದಾನ ವಿಷಯವು ವಿಶದವಾಗಿ ಬರೆಯಲ್ಪಟ್ಟಿರುವದೆಂದು ಸ್ಪಷ್ಟವಾಗುತ್ತದೆ. ಅಸ್ತು !

ಆದ್ಯ ಶಂಕರಾಚಾರ್ಯರು ಈಗ್ಗೆ ೨೦೦೦ ವರ್ಷಗಳ ಪೂರ್ವದಲ್ಲಿ ದ್ದರೆಂಬ ವಿಷಯವು ಅನೇಕ ಗ್ರಂಥಗಳಿಂದ ತಿಳಿದು ಬರುತ್ತದೆ. ಶ್ರೀ ಶಂಕರಾಚಾರ್ಯರ ಮಠಕ್ಕೆ ಅನುಕ್ರಮವಾಗಿ ಸುರೇಶ್ವರಾಚಾರ್ಯ, ನಿತ್ಯಬೋಧಘನಾಚಾರ್ಯ, ಜ್ಞಾನಘನಾಚಾರ್ಯ, ಜ್ಞಾನೋತ್ತಮ ಶಿವಾಚಾರ್ಯ, ಜ್ಞಾನಗಿರಿ ಆಚಾರ್ಯ, ಸಿಂಹಗಿರಿ ಆಚಾರ್ಯ, ಈಶ್ವರ ತೀರ್ಥ, ನರಸಿಂಹತೀರ್ಥ, ವಿದ್ಯಾಶಂಕರತೀರ್ಥ, ಭಾರತೀಕೃಷ್ಣತೀರ್ಥ ಇಷ್ಟು ಜನರು ಪೀಠಾಧಿಪತಿಗಳಾದರೆಂದೂ, ಸುರೇಶ್ವರಾಚಾರ್ಯರೆಂಬವರು ೮೦೦ ವರ್ಷಗಳವರೆಗೆ ಜೀವಿತರಾಗಿದ್ದರೆಂದೂ, ಆದ್ಯ ಶಂಕರಾಚಾರ್ಯರು ವಿಕ್ರಮಸಂವತ್ ೧ಳ ಈಶ್ವರನಾಮಸಂವತ್ಸರ ವೈಶಾಖ ಶು|| ೩ ದಿವಸ ಸನ್ಯಾಸವನ್ನು ಸ್ವೀಕರಿಸಿದರೆಂದೂ, ವಿಜಯನಾಮ ಸಂವತ್ಸರ ಚೈತ್ರ ಶು|| ೧೫ ದಿವಸ ಸುರೇಶ್ವರಾಚಾರ್ಯರಿಗೆ ಶೃಂಗೇರಿ ಮಠದ ಪಟ್ಟವನ್ನು ಕಟ್ಟಿದರೆಂದೂ, ವಿಕ್ರಮಸಂವತ್ ೪೬ ಸೌಮ್ಯನಾಮಸಂವತ್ಸರ ಜ್ಯೇಷ್ಠ ಶು|| ೧೨ ದಿವಸ ಪರಲೋಕವಾಸಿಗಳಾದರೆಂದೂ ಮದ್ರಾಸ್‌ನಗರ ನಿವಾಸಿ

ಗಳಾದ ಶ್ರೀಮಾನ್ ಬಿ. ಸೂರ್ಯನಾರಾಯಣರಾವ್, ಬಿ.ಎ., ಎಂ.ಆರ್.ಎ.ಎಸ್. ಇವರಿಂದ ವಿರಚಿತವಾದ ವಿಜಯನಗರ ಚರಿತ್ರದಲ್ಲಿ ಉಲ್ಲೇಖಿಸಿದ ಶೃಂಗೇರಿ ಮಠದ ವಂಶಾವಳಿಯಿಂದ ತಿಳಿದುಬರುತ್ತದೆ. ಈ ವಿಷಯವನ್ನು ವಿಮರ್ಶಿಸಿದರೆ ಆದ್ಯ ಶಂಕರಾಚಾರ್ಯರು ಈಗ್ಗೆ ಸುಮಾರು ೨೦೦೦ ವರ್ಷಗಳ ಪೂರ್ವದಲ್ಲಿ ಜನ್ಮವನ್ನು ತಾಳಿದರೆಂದು ಸ್ಪಷ್ಟವಾಗುತ್ತದೆ.

ಶ್ರೀಶಂಕರಾಚಾರ್ಯರ ಕಾಲಮಾನದ ವಿಷಯದಲ್ಲಿ ಸದ್ಯಃ ಮತಭೇದವುಂಟಾಗಿದೆ. ಕೆಲವರು ಶಂಕರಾಚಾರ್ಯರು ಈಗ್ಗೆ ೨೦೦೦ ವರ್ಷಗಳ ಪೂರ್ವದಲ್ಲಿದ್ದರೆಂದೂ, ಇನ್ನು ಕೆಲವರು ೧೨೦೦ ವರ್ಷಗಳ ಪೂರ್ವದಲ್ಲಿದ್ದರೆಂದೂ ಅಭಿಪ್ರಾಯಪಡುತ್ತಾರೆ. ಬಹುಕಾಲದಿಂದ ಗುರುಪರಂಪರಾದ್ವಾರಾ ಬಂದಿರುವ ಶೃಂಗೇರಿಮಠದ ವಂಶಾವಳಿಯಿಂದಲೂ, ಕೆಲವು ಗ್ರಂಥಾಧಾರಗಳಿಂದಲೂ ಅವರು ಈಗ್ಗೆ ೨೦೦೦ ವರ್ಷಗಳ ಪೂರ್ವದಲ್ಲಿ ಅವತರಿಸಿದರೆಂದೇ ಸಿದ್ಧವಾಗುವದು. ಈ ಕಾಲವು ಶ್ರೀರೇಣುಕಾಚಾರ್ಯರ ಅಸ್ತಿತ್ವದ ಕಾಲವಾಗಿರುತ್ತದೆ. ಶ್ರೀರೇಣುಕಾಚಾರ್ಯರು ಪರಶಿವನ ಅಪ್ಪಣೆಯ ಮೇರೆಗೆ ಈ ಭೂಮಂಡಲದಲ್ಲಿ ೧೪೦೦ ವರ್ಷಗಳವರೆಗೆ ವಾಸವಾಗಿದ್ದರೆಂಬುದನ್ನು ಅವರ ವಿಷಯದಲ್ಲಿದ್ದ ಸಮಸ್ತ ಚರಿತ್ರಗ್ರಂಥಗಳು ಮುಕ್ತಕಂಠದಿಂದ ಸಾರುತ್ತವೆ. ಇವೇ ಮೊದಲಾದ ವಿಷಯಗಳನ್ನು ವಿಮರ್ಶಿಸಿ ನೋಡಿದರೆ ಕಲಿಯುಗದಲ್ಲಿ ಶ್ರೀರೇಣುಕಾಚಾರ್ಯರು ಈಗ್ಗೆ ಸುಮಾರು ೩೩೦೦ ವರ್ಷಗಳ ಪೂರ್ವದಲ್ಲಿ ಅವತರಿಸಿರಬಹುದೆಂದು ಸ್ಪಷ್ಟವಾಗುತ್ತದೆ. ಇದರಿಂದ ಶ್ರೀರೇಣುಕಾಚಾರ್ಯರು ಬಹು ಪುರಾತನ ಕಾಲದಲ್ಲಿದ್ದರೆಂಬ ವಿಷಯವು ಸರ್ವರಿಗೂ ಕರತಲಾಮಲಕದಂತೆ ಸ್ಪಷ್ಟವಾಗಿ ತೋರುವುದು.

# ಶ್ರೀ ಜಗದ್ಗುರು ಪಂಚಾಚಾರ್ಯರನ್ನು ಸ್ತುತಿಸಿರುವ ಪ್ರಾಚೀನ ಗ್ರಂಥಕಾರರು.

## ಶಿವಯೋಗಿ ಶಿವಾಚಾರ್ಯ



ಶ್ರೀ ಶಿವಯೋಗಿ ಶಿವಾಚಾರ್ಯರು ವೀರಶೈವಸಿದ್ಧಾಂತವನ್ನು ಪ್ರತಿಪಾದಿಸತಕ್ಕ "ಸಿದ್ಧಾಂತ ಶಿಖಾಮಣಿ" ಯೆಂಬ ಅಮೂಲ್ಯ ಗ್ರಂಥವನ್ನು ಬರೆದಿರುವ ವಿಷಯವು ಸುಪ್ರಸಿದ್ಧವಾಗಿದೆ. ವ್ಯಾಸ ಮಹರ್ಷಿಗಳು ಶ್ರೀಕೃಷ್ಣಾರ್ಜುನರ ಸಂವಾದವನ್ನು ಸಂಗ್ರಹಿಸಿ ಅದಕ್ಕೆ "ಭಗವದ್ಗೀತಾ" ಎಂಬ ನಾಮವನ್ನು ಇಟ್ಟಂತೆ, ಶ್ರೀಶಿವಯೋಗಿ ಶಿವಾಚಾರ್ಯರು ಶ್ರೀರೇಣುಕಾಗಸ್ತ್ಯರ ಸಂವಾದವನ್ನು ಸಂಗ್ರಹಿಸಿ ಅದಕ್ಕೆ "ಸಿದ್ಧಾಂತ ಶಿಖಾಮಣಿ" ಯೆಂಬ ನಾಮವನ್ನಿಟ್ಟಿರುವರು. ಈ ಗ್ರಂಥವು ಈಗ ದೊರೆಯುತಕ್ಕ ವೀರಶೈವ ಮತಗ್ರಂಥಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದು. ಈ ಪ್ರಪಂಚದಲ್ಲಿ ವೀರಶೈವಸಿದ್ಧಾಂತಗ್ರಂಥಗಳು ಎಷ್ಟಿರುವವೋ ಆ ಸಮಸ್ತ ಗ್ರಂಥಗಳಲ್ಲಿಯೂ ಈ ಗ್ರಂಥರತ್ನದ ಪವಿತ್ರನಾಮವು ಪ್ರಕಾಶಿಸುತ್ತಿರುವುದು. ಕ್ರಿ. ಶ. ೧೧ ನೆಯ ಶತಮಾನದಲ್ಲಿದ್ದ ಶ್ರೀಪತಿಪಂಡಿತಾರಾಧ್ಯರಿಂದ ಬ್ರಹ್ಮಸೂತ್ರಗಳ ಮೇಲೆ ರಚಿಸಲ್ಪಟ್ಟಿರುವ "ಶ್ರೀಕರ ಭಾಷ್ಯ" ದಲ್ಲಿಯೂ ಸಹ ಈ ಗ್ರಂಥದ ವಾಕ್ಯಗಳು ಅನೇಕ ಕಡೆಗೆ ಪ್ರಮಾಣರೂಪವಾಗಿ ಉದಾಹರಿಸಲ್ಪಟ್ಟಿರುವವು. ಶ್ರೀಪತಿ ಪಂಡಿತರು "ಅಥಾತೋ ಬ್ರಹ್ಮಜಿಜ್ಞಾಸಾ" (೧-೧-೧) ಎಂಬ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆಯುವ ಸಂದರ್ಭದಲ್ಲಿ—

ಪವಿತ್ರಂ ತೇ—ಇತಿ ಋಗ್ವೇದಮಂತ್ರಸ್ಯ ಸಿದ್ಧಾಂತಶಿಖಾಮಣೌ ಶ್ರೀರೇಣುಕಾಚಾರ್ಯೇಣ ಲಿಂಗಧಾರಣಪರತ್ವೇನ ನಿರ್ದೇಶಾತ್ ।

ರೇಣುಕಭಗವತ್ಪಾದಾಚಾರ್ಯೇಣಾಪಿ—" ಪಿಂಡತಾ ಪಿಂಡ ವಿಜ್ಞಾನಂ" ಇತ್ಯಾರಭ್ಯ—" ಏತಾನಿ ಶಿವಭಕ್ತಸ್ಯ ಕರ್ತವ್ಯಾನಿ ಪ್ರಯತ್ನತಃ ॥" ಇತ್ಯಂತೇನ ಸಿದ್ಧಾಂತಶಿಖಾಮಣೌ ತಸ್ಯೈವೋ ಪದೇಶಾತ್ ।

ಇತ್ಯಾದಿ ವಾಕ್ಯಗಳನ್ನು ಬರೆದು ಸಿದ್ಧಾಂತ ಶಿಖಾಮಣಿಯ ಪವಿತ್ರ ನಾಮವನ್ನು ಉಲ್ಲೇಖಿಸಿರುವರು. ಇದಲ್ಲದೆ ಸುಪ್ರಸಿದ್ಧ "ಶ್ರೀಕಂಠ ಭಾಷ್ಯ"ಕಾರರಾದ ಶ್ರೀಕಂಠಶಿವಾಚಾರ್ಯರೂ ಸಹ "ಅವಿಭಾಗೇನ ದೃಷ್ಟತ್ವಾತ್" (೪-೪-೪) ಎಂಬ ಬ್ರಹ್ಮಸೂತ್ರದ ಭಾಷ್ಯದಲ್ಲಿ ಸಿದ್ಧಾಂತ ಶಿಖಾಮಣಿಯ ೯ ನೆಯ ಪರಿಚ್ಛೇದದಲ್ಲುಕ್ತವಾಗಿರುವ "ಮುಕ್ತಃ ಶಿವಸಮೋ ಭವೇತ್" ಎಂಬ ಶ್ಲೋಕವನ್ನು ಪ್ರಮಾಣವನ್ನಾಗಿ ಉದಾ ಹರಿಸಿದ್ದಾರೆ. ಈ ರೀತಿಯಾಗಿ ಜಗತ್ಪ್ರಸಿದ್ಧರಾದ ಭಾಷ್ಯಕಾರರೇ ಈ ಗ್ರಂಥವನ್ನು ಪ್ರಮಾಣವನ್ನಾಗಿ ಸ್ವೀಕರಿಸಿದ ಮೇಲೆ ಇದರ ಯೋಗ್ಯ ತೆಯು ಎಷ್ಟು ಘನವಾಗಿರಬಹುದೆನ್ನುವುದನ್ನು ಬೇರೆ ವರ್ಣಿಸಬೇಕಾಗಿಲ್ಲ.

ಕ್ರಿ.ಶ. ೧೧ ನೆಯ ಶತಮಾನದಲ್ಲಿದ್ದ ಶ್ರೀಪತಿಪಂಡಿತರೂ, ಇವರಿ ಗಿಂತಲೂ ಪ್ರಾಚೀನರಾಗಿರುವ ಶ್ರೀಕಂಠಶಿವಾಚಾರ್ಯರೂ ತಮ್ಮ ತಮ್ಮ ಭಾಷ್ಯದಲ್ಲಿ ಈ ಗ್ರಂಥದ ಪ್ರಮಾಣವನ್ನು ಉಲ್ಲೇಖಿಸಿರುವುದನ್ನು ನೋಡಿದರೆ, ಈ ಗ್ರಂಥವು ಬಹು ಪುರಾತನವಾದುದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಈ ಗ್ರಂಥಕಾರರಾದ ಶ್ರೀಶಿವಯೋಗಿ ಶಿವಾಚಾರ್ಯರು ಸಿದ್ಧಾಂತಶಿಖಾಮಣಿಯ ೧ ನೆಯ ಪರಿಚ್ಛೇದದಲ್ಲಿ—

ಯೇನ ರಕ್ಷಾವತೀ ಜಾತಾ ಶಿವಭಕ್ತಿಃ ಸನಾತನೀ ।
ಬೌದ್ಧಾದಿಪ್ರತಿಸಿದ್ಧಾಂತಮಹಾಧ್ವಾಂತಾಂಶುಮಾಲಿನಾ ॥೨೩॥

ಎಂಬೀ ಶ್ಲೋಕವನ್ನು ಉಲ್ಲೇಖಿಸಿರುವರು. ಈ ಶ್ಲೋಕಾಭಿಪ್ರಾಯ ವನ್ನು ವಿಮರ್ಶಿಸಿ ನೋಡಿದರೆ, ಈ ಗ್ರಂಥಕಾರರ ಕಾಲದಲ್ಲಿ ಬೌದ್ಧರ

ಉಪದ್ರವದಿಂದ ಶಿವಭಕ್ತಿಗೆ ವಿಶೇಷವಾದ ತೊಂದರೆಯುಂಟಾಗಿತ್ತೆಂದೂ, ಈ ಮಹಾತ್ಮರು ಬೌದ್ಧಸಿದ್ಧಾಂತವನ್ನು ಖಂಡಿಸಿ ಜಗತ್ತಿನಲ್ಲಿ ಶಿವಭಕ್ತಿಯನ್ನು ರಕ್ಷಿಸಿದರೆಂದೂ ಸ್ಪಷ್ಟವಾಗಿ ತೋರಿಬರುತ್ತದೆ. ಭರತಖಂಡದಲ್ಲಿ ಬೌದ್ಧಸಿದ್ಧಾಂತವು ಈಗ್ಗೆ ೨ ಸಾವಿರ ವರ್ಷಗಳ ಪೂರ್ವದಲ್ಲಿ ವಿಶೇಷ ಪ್ರಚಾರದಲ್ಲಿದ್ದಿತೆಂಬ ವಿಷಯವು ಎಲ್ಲರಿಗೂ ತಿಳಿದುದಾಗಿದೆ. ಆದುದರಿಂದ ಈ ಮಹಾತ್ಮರು ಬೌದ್ಧರ ಪ್ರಾಬಲ್ಯಸಮಯದಲ್ಲಿಯೇ ಜನ್ಮವೆತ್ತಿರಬಹುದೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಅರ್ಥಾತ್ ಇವರು ಈಗ್ಗೆ ೨ ಸಾವಿರ ವರ್ಷಗಳ ಪೂರ್ವದಲ್ಲಿದ್ದರೆಂಬುದು ನಿರ್ವಿವಾದವು.

ಶ್ರೀಶಿವಯೋಗಿ ಶಿವಾಚಾರ್ಯರು ತಮ್ಮಿಂದ ರಚಿತವಾಗಿರುವ "ಸಿದ್ಧಾಂತ ಶಿಖಾಮಣಿ"ಯ ೪ ನೆಯ ಪರಿಚ್ಛೇದದಲ್ಲಿ ಶ್ರೀಜಗದ್ಗುರು ರೇಣುಕಾಚಾರ್ಯರು ಶ್ರೀಸೋಮೇಶ್ವರ ಲಿಂಗದಿಂದ ಅವತರಿಸಿದ ವಿಷಯವನ್ನೂ, ೫ನೆಯ ಪರಿಚ್ಛೇದದಿಂದ ೨೦ನೆಯ ಪರಿಚ್ಛೇದದವರೆಗೆ ವೀರಶೈವ ಸಿದ್ಧಾಂತ ವಿಷಯವನ್ನೂ, ೨೧ ನೆಯ ಪರಿಚ್ಛೇದದಲ್ಲಿ "ವಿಭೀಷಣಾಭೀಷ್ಟ ವರಪ್ರದಾನ" ಮತ್ತು "ಸೋಮನಾಥಲಿಂಗೈಕ್ಯ" ವಿಷಯಗಳನ್ನೂ ಉಲ್ಲೇಖಿಸಿದ್ದಾರೆ. ಈಗ್ಗೆ ೨ ಸಾವಿರ ವರ್ಷಗಳ ಪೂರ್ವದಲ್ಲಿದ್ದ ಶ್ರೀಶಿವಯೋಗಿ ಶಿವಾಚಾರ್ಯರು ಶ್ರೀರೇಣುಕಾಚಾರ್ಯರ ಅವತಾರ ಮತ್ತು ಲಿಂಗೈಕ್ಯ ಇವುಗಳನ್ನು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ ಮೇಲೆ, ಶ್ರೀರೇಣುಕಭಗವತ್ಪಾದರು ಎಷ್ಟು ಪ್ರಾಚೀನಕಾಲದವರಾಗಿರಬಹುದೆಂಬುದನ್ನು ಕುಶಲರೇ ಯೋಚಿಸಬೇಕು.



# ಈಶಾನ ಶಿವಗುರು

ಶ್ರೀಮದೀಶಾನಶಿವಗುರುಗಳು ಶ್ರೀಮಜ್ಜಗದ್ಗುರು ರೇಣುಕಾಚಾರ್ಯರ ಚರಿತ್ರವನ್ನು ಸಂಸ್ಕೃತ ಭಾಷೆಯಲ್ಲಿ ಬರೆದಿರುವರು. ಈ ವಿಷಯವನ್ನು ಬೊಮ್ಮರಸಕವಿಯು ಕನ್ನಡ ಭಾಷೆಯಲ್ಲಿ ಬರೆದಿರುವ "ರೇವಣಸಿದ್ಧೇಶ್ವರಪುರಾಣ" ದಲ್ಲಿ ಸ್ಪಷ್ಟಪಡಿಸಿರುವನು. ಈಶಾನ ಶಿವಗುರುಗಳು ಆಂಧ್ರದೇಶದಲ್ಲಿರುವ ರಾಜಮಹೇಂದ್ರ ನಗರದಲ್ಲಿ ವಾಸವಾಗಿದ್ದರು. ಇವರು ಮಹಾಜ್ಞಾನಿಗಳೆಂದು ಲೋಕವಿಖ್ಯಾತರಾಗಿರುವರು. **ಈಶಾನಶಿವಗುರುಗಳು** ಕ್ರಿ. ಶ. ೯೫೦ ರಲ್ಲಿದ್ದರೆಂಬ ವಿಷಯವು ಕಡಪಾ ಡಿ॥ ಸಿದ್ಧವಟಂ ತಾಲೂಕು "ದೊಂಗಲಸಾನಿ" ಗ್ರಾಮದ ಶಿವಾಲಯದಲ್ಲಿರುವ ಒಂದು ಶಿಲಾಶಾಸನದಿಂದ ತಿಳಿದುಬರುತ್ತದೆ. ಈ ಶಾಸನದ ವಿಷಯವು ಮದ್ರಾಸ್ ಗವರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿರುವ ಕರ್ನಲ್ ಕೆ. ಮೆಕೆಂಜಿ ಯವರ ರಿಪೋರ್ಟಿನ (ತಾ. 15-4-1926) ೧೫೫ ನೆಯ ಪೇಜಿನಲ್ಲಿ ಬರೆಯಲ್ಪಟ್ಟಿರುವುದು. ಇದರಿಂದ ಈಶಾನಶಿವಗುರುಗಳು ಈಗ್ಗೆ ೧ ಸಾವಿರ ವರ್ಷಗಳ ಪೂರ್ವದಲ್ಲಿದ್ದರೆಂದು ಸ್ಪಷ್ಟವಾಗುವದು.

# ಸಿದ್ಧನಾಥಶಿವಾಚಾರ್ಯ

ಶ್ರೀ ಸಿದ್ಧನಾಥಶಿವಾಚಾರ್ಯರೆಂಬವರು ಶ್ರೀ ಜಗದ್ಗುರು ರೇಣುಕಾಚಾರ್ಯರ ಪವಿತ್ರ ಚರಿತ್ರವನ್ನು "ರೇಣುಕವಿಜಯ" ಎಂಬ ಹೆಸರಿನಿಂದ ಸಂಸ್ಕೃತ ಭಾಷೆಯಲ್ಲಿ ಬರೆದಿರುವುದು ಸರ್ವತ್ರ ಸುಪ್ರಸಿದ್ಧವೇ ಅದೆ. ಈ ಗ್ರಂಥಕಾರರು ತಮ್ಮ ಗ್ರಂಥದ ಆದಿಯಲ್ಲಿ "ಶ್ರೀಜಗದ್ಗುರು

ರೇಣುಕಾದಿ ಪಂಚಾಚಾರ್ಯರನ್ನು ಬಹುಭಕ್ತಿಯಿಂದ ಸ್ತುತಿಸಿದ್ದಾರೆ. ಆ ಪದ್ಯಗಳು ಈ ಕೆಳಗೆ ಉದಾಹರಿಸಲ್ಪಟ್ಟಿವೆ.

ಪೂರ್ವಂ ಸೃಷ್ಟಿಸಮುದ್ಭವಾತ್ಪರಶಿವಾದುದ್ಭೂಯ ಸರ್ವೈರ್ಭವಾತ್
ಸಿದ್ಧಾಂತಂ ಶ್ರುತಿಸಿದ್ಧಮದ್ಭುತತಮಂ ಸಂಸ್ಥಾಪ್ಯ ಸಂವಿಶ್ರುತಾಃ ।
ಸಿದ್ಧಸ್ತೋಮಸುರದ್ರುಮಾಃ ಸುರವರೈಃ ಸಂಸೇವ್ಯಮಾನಾಃ ಸದಾ
ಪಂಚಾಚಾರ್ಯಗುರೂತ್ತಮಾಃ ಸಕರುಣಂ ಸಿದ್ಧಿಂ ವಿತನ್ವಂತು ಮೇ ॥೪॥

ಶ್ರೀಮಾನ್ ಸೋಮೇಶಲಿಂಗೋತ್ಥಿತವಪುರಖಿಲಶ್ಲಾಘನೀಯಾನುಭಾವಃ ।
ಸಿದ್ಧಾನಾಂ ಸಾರ್ವಭೌಮಃ ಪ್ರವಿತತತಪಸಾಮಾಕರಃ ಸಾಧುಭಾವಃ ॥
ಶೈವಾದ್ವೈತಪ್ರತಿಷ್ಠಾಚಣಮತಿರಮಲಜ್ಞಾನಭೂತಿರ್ನಿರೀತಿಃ ।
ದದ್ಯಾಚ್ಛ್ರೀರೇಣುಕಾಖ್ಯೋ ಗುರುವರಚರಣಃ ಸಮ್ಯಗಿಷ್ಟಾರ್ಥಸಿದ್ಧಿಂ ॥೫॥

ಇದೇ ರೀತಿಯಾಗಿ ಈ ಮಹಾಕವಿಗಳು ತಮ್ಮ ಗ್ರಂಥದಲ್ಲಿ ಅನೇಕ ಕಡೆಗೆ ಮಹಾಚಾರ್ಯರನ್ನು ಕೊಂಡಾಡಿದ್ದಾರೆ. ಇವರ ಕವಿತಾ ಸರಣಿಯು ಬಹು ಹೃದಯಂಗಮವಾಗಿರುವದು. ಅಸ್ತು!

ಈ ಗ್ರಂಥಕಾರರು ಗ್ರಂಥಾಂತ್ಯದಲ್ಲಿ ಗ್ರಂಥ ಸಮಾಪ್ತಿಕಾಲವನ್ನು ಉಲ್ಲೇಖಿಸಿದ್ದಾರೆ. ಆ ಶ್ಲೋಕವು ಈ ಕೆಳಗೆ ಉದಾಹರಿಸಲ್ಪಟ್ಟಿದೆ.

ಋತುಬ್ರಹ್ಮನಿಯಚ್ಛ್ರಸ್ಮಮಿತೇ ವಿಕ್ರಮವತ್ಸರೇ ।
ಮಾರ್ಗಶೀರ್ಷೇ ಚ ಪೌರ್ಣಿಮ್ಯಾಂ ಪ್ರಬಂಧಃ ಪ್ರಾಪ ಪೂರ್ಣತಾಂ ॥

ವಿಕ್ರಮಸಂವತ್ಸರ ೧೧೧೬ ಮಾರ್ಗಶೀರ್ಷಮಾಸ ಪೌರ್ಣಮಿಯ ದಿವಸ ಈ ಗ್ರಂಥವು ಪೂರ್ತಿಗೊಳಿಸಲ್ಪಟ್ಟಿತು. ಎಂಬುದು ಈ ಶ್ಲೋಕದ ಅಭಿಪ್ರಾಯ.

ಈ ಗ್ರಂಥವು ಈಗ್ಗೆ ೯೮೮ ವರ್ಷಗಳ ಪೂರ್ವದಲ್ಲಿ (ಕ್ರಿ. ಶ. ೯೫೯) ರಚಿಸಲ್ಪಟ್ಟಿರುವುದೆಂದು ಹೇಳಲ್ಪಟ್ಟಿರುವುದರಿಂದ, ಶ್ರೀ ಸಿದ್ಧನಾಥ ಶಿವಾಚಾರ್ಯರು ಈಗ್ಗೆ ೧೦೦೦ ವರ್ಷಗಳ ಪೂರ್ವದಲ್ಲಿದ್ದರೆಂದು ಸ್ಪಷ್ಟವಾಗುವದು.

# ಶ್ರೀಪತಿ ಪಂಡಿತಾರಾಧ್ಯ

ಶ್ರೀಪತಿ ಪಂಡಿತಾರಾಧ್ಯರು ಕ್ರಿ. ಶ. ೧೧ ನೆಯ ಶತಮಾನದಲ್ಲಿ ಆಂಧ್ರದೇಶದಲ್ಲಿ ವಿರಾಜಿಸುತ್ತಿರುವ ವಿಜಯವಾಟಿಕಾ (ಬಿಜವಾಡ)ನಗರದಲ್ಲಿ ಜನ್ಮವೆತ್ತಿದರು. ಈ ಮಹಾತ್ಮರು ವೇದವೇದಾಂಗಾದಿಗಳಲ್ಲಿಯೂ, ತರ್ಕಮೀಮಾಂಸಾದಿಶಾಸ್ತ್ರಗಳಲ್ಲಿಯೂ ಅದ್ವಿತೀಯವಾದ ಪಾಂಡಿತ್ಯವನ್ನು ಸಂಪಾದಿಸಿಕೊಂಡಿದ್ದರು. ಈ ವಿಷಯದಲ್ಲಿ ಇವರು ಬ್ರಹ್ಮಸೂತ್ರಗಳ ಮೇಲೆ ವೀರಶೈವಮತದ ಪರವಾಗಿ ಬರೆದಿರುವ ಶ್ರೀಕರಭಾಷ್ಯವು ಮುಖ್ಯನಿದರ್ಶನವಾಗಿದೆ. ವೀರಶೈವಮತದ ಪುರಾತನ ಕವಿಗಳು ಈ ಮಹಾತ್ಮರನ್ನು ಅಸಾಧಾರಣ ಭಕ್ತಿಯಿಂದ ಕೊಂಡಾಡಿರುವರು. ಶ್ರೀಪತಿ ಪಂಡಿತಾರಾಧ್ಯರು ತಾವು ಬರೆದಿರುವ ಶ್ರೀಕರಭಾಷ್ಯದ ಪ್ರಾರಂಭದಲ್ಲಿ ಶ್ರೀರೇಣುಕಾದ್ಯಾಚಾರ್ಯರನ್ನು ಬಹುಭಕ್ತಿಯಿಂದ ಸ್ತುತಿಸಿರುವರು. ಆ ಶ್ಲೋಕಗಳು ಈ ಕೆಳಗೆ ಉದಾಹರಿಸಲ್ಪಟ್ಟಿರುವವು.

ಸದಾಶಿವಂ ಶಕ್ತಿಧರಂ ಸುಕೇಶಂ ಚಂಡೀಶ್ವರಂ ಭೃಂಗಿರಿಟಂ ಶಿಲಾದಂ ।
ಕುಂಭೋದ್ಭವಂ ಚಿನ್ಮಯವಾಮದೇವಂ ಶ್ರೀರೇವಣಾಸಿದ್ಧಗುರುಂ ಪ್ರಪದ್ಯೇ॥
ಶ್ರೀಮಚ್ಛಿವಾಚಾರವಿಚಾರದೀಕ್ಷಂ ಸ್ವಶಿಷ್ಯಸತ್ಪ್ರೀಣನಪೂರ್ಣಪಕ್ಷಂ ।
ದುರ್ವಾರಕಾಮಾದಿವಿದಾರದಕ್ಷಂ ಭಜಾಮ್ಯಹಂ ರೇವಣಕಲ್ಪವೃಕ್ಷಂ ॥೬॥

ಶ್ರೀಮತ್ಸರ್ವಕಲಾಸು ಕೋವಿದತಮಃ ಪ್ರಾಲೇಯಶೈಲಾತ್ಮಜಾ ।
ಜಾನೇಃ ಪೂರ್ಣಕೃಪಾವಿಶೇಷನಿಚಯಪ್ರಜ್ಞಾನಧೀಯೋರ್ಃ ಬಭೌ ॥
ಶ್ರೀಮದ್ರೇವಣದೇಶಿಕೇಂದ್ರವಿಭವಂ ಲಿಂಗಾವಧಾನೋಜ್ಜ್ವಲಂ ।
ಸಿದ್ಧಾರ್ಯಂ ಮರುಲಪ್ರಭುಂ ಬುಧನುತಂ ತಂ ಮನ್ಮಹೇ ಶ್ರೇಯಸೇ ॥೭॥

ಏಕೋರಾಮಾಖ್ಯಸಿದ್ಧಂ ಪ್ರಥಿತಗುಣಗಣಾಗಣ್ಯಪುಣ್ಯೋದಯಶ್ರೀ ।
ಸಮ್ಯಕ್ಸಂಸೇವ್ಯಮಾನಂ ಬುಧನುತಚರಿತಂ ದ್ವಾಪರಾಚಾರ್ಯವರ್ಯಂ ॥
ಉದ್ಯದ್ವೇದಾಂತಶಾಸ್ತ್ರೋಭಯಗತವಿಲಸಚ್ಛೈವಸಂಸ್ಥಾಪನಾಢ್ಯಂ ।
ಪೂರ್ವಾಚಾರ್ಯಪ್ರಸಿದ್ಧಂ ಶರಣಮಹಮಿಮಂ ದೇಶಿಕೇಂದ್ರಂ ಪ್ರಪದ್ಯೇ ॥೮॥

ವಾತೂಲಾಂತಿಮಕಾಮಿಕಾದಿಶಿವಶಾಸ್ತ್ರಜ್ಞಾನಷಾಣ್ಮಾತುರೋ ।
ಮೀಮಾಂಸಾದ್ವಯತತ್ತ್ವಬೋಧಕವಚಸ್ಸಂರಂಭಪಾಂಭೋಜಜಃ ॥
ತರ್ಕವ್ಯಾಕರಣಾದಿಶಾಸ್ತ್ರನಿಚಯೇ ಸಾಕ್ಷಾದ್ಭವಾನೀಪತಿಃ ।
ತಸ್ಮೈ ಶ್ರೀಗುರುಮೂರ್ತಯೇ ಶಿವಮತಾಚಾರ್ಯಾಯ ತುಭ್ಯಂ ನಮಃ ॥೯॥

ಶ್ರೀಮದ್ದಂಡಶಿಖೋಪವೀತವಿಲಸತ್ಕಂಥಾಜಿನಾಲಂಕೃತಃ ।
ಕಾಷಾಯಾಂಬರಕುಂಡಿಕಾಪ್ರಣವಪಾತ್ರಚ್ಛತ್ರಮೌಂಜೀಧರಃ ॥
ವೇದಾಂತೋಭಯವಾಕ್ಪ್ರಬೋಧಿತಲಸಚ್ಛ್ರೀಭಸ್ಮಘುಂಟೀಯುತ ।
ಶ್ಶ್ರೀಕೋರಾಮಯತೀಂದ್ರಶೇಖರಶಿವಾಚಾರ್ಯಃ ಸದಾ ಪಾತು ನಃ ॥೧೦॥

ಈ ರೀತಿಯಾಗಿ ಶ್ರೀರೇಣುಕಾದಿಪೂರ್ವಾಚಾರ್ಯರನ್ನು ಅನ್ಯಾದೃಶ ಭಕ್ತಿಭಾವದಿಂದ ಸ್ತುತಿಸಿದ್ದಾರೆ. ಏಕೋರಾಮ ಶಿವಾಚಾರ್ಯರನ್ನು ದ್ವಾಪರಯುಗದ ಆಚಾರ್ಯರೆಂದು ೮ ನೆಯ ಶ್ಲೋಕದಲ್ಲಿ ಕೊಂಡಾಡಿದ್ದಾರೆ. ಶ್ರೀಪತಿ ಪಂಡಿತಾರಾಧ್ಯರು ಮೇಲುದಾಹರಿಸಿರುವ ಪದ್ಯಗಳಲ್ಲಿ ಶ್ರೀರೇವಣಸಿದ್ಧ–ಮರುಲಸಿದ್ಧರಿಗಿಂತಲೂ ಏಕೋರಾಮಸಿದ್ಧರನ್ನು ವಿಶೇಷವಾಗಿ ಕೊಂಡಾಡಿರುವುದರಿಂದ ಇವರು ಶ್ರೀಮದೇಕೋರಾಮ ಶಿವಾಚಾರ್ಯರ ಶಿಷ್ಯರಿರಬಹುದೆಂದು ತೋರಿಬರುತ್ತದೆ. ಅಸ್ತು !

ಅಗ್ನಿಸ್ತಂಭನಾದ್ಯನಂತ ಮಹಿಮೆಗಳನ್ನು ತೋರಿ ಅನಂತಪಾಲಾದಿ ರಾಜರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ಲೋಕೋತ್ತರ ಕೀರ್ತಿಶಾಲಿಗಳಾಗಿರುವ ಶ್ರೀಪತಿ ಪಂಡಿತಾರಾಧ್ಯರ ಕಾಲಮಾನವನ್ನು ನಾನಾ ಜನರು ನಾನಾವಿಧವಾಗಿ ಬರೆದಿದ್ದಾರೆ. ಕರ್ನಾಟಕಕವಿಚರಿತ್ರಕಾರರೇ ಮೊದಲಾದವರು, ಇವರು ಕ್ರಿ.ಶ. ೧೨ನೆಯ ಶತಮಾನದಲ್ಲಿದ್ದ ಬಸವಾದಿಗಳ ಸಮಕಾಲೀನರೆಂದು ಬರೆದು, ಆ ಕಾಲವನ್ನೇ ಪ್ರಚಾರಮಾಡಿರುವುದರಿಂದ, ಬಹು ಜನರು ಅದನ್ನೇ ನಂಬಿ ಅದೇ ಮಾರ್ಗವನ್ನೇ ಅನುಸರಿಸಹತ್ತಿದ್ದಾರೆ. ಆದರೆ ಕರ್ಣಾಟಕಕವಿಚರಿತ್ರಕಾರರು ಪರಮತೀಯರಾದುದರಿಂದ ಈ ಮಹಾತ್ಮರ ಕಾಲಮಾನವನ್ನು ಸರಿಯಾಗಿ ವಿಮರ್ಶಿಸದೆ ತಮ್ಮ ಮನಸ್ಸಿಗೆ ಬಂದಂತೆ ಬರೆದುಬಿಟ್ಟಿರುವರು. ಅವರು ಬರೆದಿರುವ ಕಾಲವು

ಭ್ರಾಂತಿಪೂರ್ಣವಾದುದೆಂಬುದು ಈ ಮುಂದೆ ಪ್ರತಿಪಾದಿಸುವ ಶಿಲಾಶಾಸನಾದ್ಯನೇಕ ಪ್ರಮಾಣಗಳಿಂದ ಸರ್ವರಿಗೂ ಸ್ಪಷ್ಟವಾಗುವುದು.

ಬಿಜ್ಜಳನಲ್ಲಿ ಮಂತ್ರಿಯಾಗಿದ್ದ ಬಸವನು ೧೨ನೆಯ ಶತಮಾನದಲ್ಲಿದ್ದನೆಂಬ ವಿಷಯವನ್ನು ಎಲ್ಲರೂ ಒಪ್ಪುವರಷ್ಟೆ! ಬಸವನು ತನಗಿಂತಲೂ ಪ್ರಾಚೀನರಾದ ಅನೇಕಜನ ಶಿವಭಕ್ತರ ಮಹಿಮೆಯನ್ನು ಬಿಜ್ಜಳನ ಮುಂದೆ ಹೇಳುವ ಸಂದರ್ಭದಲ್ಲಿ—"ಎಲೈ ಬಿಜ್ಜಳನೇ! ಪೂರ್ವದಲ್ಲಿ ಶ್ರೀಪತಿಪಂಡಿತನೆಂಬ' ಆಚಾರ್ಯನು ಅನಂತಪಾಲ ಭೂಪಾಲನ ಸಭೆಯಲ್ಲಿ ಶಿವಭಕ್ತರಿಗೆ ಸಮಾನರುಂಟೆಂದು ಯಾರು ವಾದಿಸುವರೋ ಅವರನ್ನು ಖಂಡಿಸುವೆನೆಂದು ನುಡಿದು, ಅಗ್ನಿಯನ್ನು ಒಂದು ವಸ್ತ್ರದಲ್ಲಿಟ್ಟು, ಅದನ್ನು ಬನ್ನಿಮರಕ್ಕೆ ಕಟ್ಟಿ ಪರವಾದಿಗಳಿಗೆ ಬೆಂಕಿಯು ದೊರೆಯದಂತೆ ಮಾಡಿದನು." ಎಂದು ಈ ಮಹಾತ್ಮರ ಮಹಿಮೆಯನ್ನು ಹೊಗಳಿರುವನು.

ಇತಿಹಾಸಾಂತರಂ ವಕ್ಷ್ಯೇ ಶೃಣು ರಾಜನ್ ಮಹಾಮತೇ ।
ಶಿವಭಕ್ತೋ ಮಹಾಯೋಗೀ ಶ್ರೀಮಾನ್ ಶ್ರೀಪತಿಪಂಡಿತಃ॥
ಶಾಸ್ತ್ರವಾದಾತಿಕುಶಲೋ ಬ್ರಾಹ್ಮಣಾನಾಂ ಸಭಾಂತರೇ ।

..............................................................

ಅನಂತಪಾಲಭೂಪಾಲಸಮಕ್ಷಂ ಭಕ್ತಿತತ್ಪರಃ ।
ಇತಿ ಪ್ರತಿಜ್ಞಾಂ ಕೃತ್ವಾಽಽಶು ನೀತ್ವಾಂಗಾರಚಯಂ ಪರಂ ।
ಪಟ್ಟವಸ್ತ್ರಾಂತರೇ ನ್ಯಸ್ಯ ಬಬಂಧ ಸದೃಢಂ ಪರಂ ॥

(ಸಂಸ್ಕೃತ ಬಸವಪುರಾಣ. ಅ. ೩೭)

ಈ ರೀತಿಯಾಗಿ ಬಸವನೇ ಈ ಮಹಾತ್ಮರ ಚರಿತ್ರವನ್ನು ಬಿಜ್ಜಳನ ಮುಂದೆ ಹೇಳಬೇಕಾದರೆ, ಶ್ರೀಪತಿಪಂಡಿತರು ಬಸವನಿಗಿಂತಲೂ ಪ್ರಾಚೀನರೆಂಬುದು ನಿರ್ವಿವಾದವಷ್ಟೆ! ಇದೇ ವಿಷಯವನ್ನು ಕ್ರಿ. ಶ. ೧೧೯೫

ರಲ್ಲಿದ್ದ ಪಾಲ್ಕುರಿಕೆಸೋಮನಾಥನು ತಾನು ರಚಿಸಿರುವ "ಆಂಧ್ರ ಬಸವಪುರಾಣ" ದಲ್ಲಿಯೂ ಬರೆದಿರುವನು.

ಭಕ್ತುಂಡು ಶ್ರೀಪತಿಪಂಡಿತುಂ ಡೀಶು
ಭಕ್ತುನಿ ಕಿಲ ಗೋಟಿಬ್ರಾಹ್ಮಣುಲ್ಯೈನ ।
ನೆಸ ಯನ್ನ ನಾಲುಕ ನೆ ಗೋಸಿವ್ವೈತು
ನನುಚು ನನಂತಪಾಲುನಿ ಸಭಾಸ್ಥಲಿನಿ ॥

(ಆಂಧ್ರಬಸವಪುರಾಣ ಆಶ್ವಾಸ. ೭)

ಇದರಿಂದ ಪಾಲ್ಕುರಿಕೆ ಸೋಮನಾಥನಿಗಿಂತಲೂ ಶ್ರೀಪತಿ ಪಂಡಿತಾರಾಧ್ಯರು ಪ್ರಾಚೀನರೆಂದು ಸ್ಪಷ್ಟವಾಗುವುದಷ್ಟೆ !

ಬಸವನ ಸಮಕಾಲ (೧೧೬೦) ದಲ್ಲಿದ್ದು ಬಸವನಿಗಿಂತಲೂ ವಯೋವೃದ್ಧನಾಗಿದ್ದ ಮಲ್ಲಿಕಾರ್ಜುನಪಂಡಿತಾರಾಧ್ಯನು ಆಂಧ್ರಭಾಷೆಯಲ್ಲಿ "ಶಿವತತ್ತ್ವಸಾರ" ಎಂಬ ಉದ್ಗ್ರಂಥವನ್ನು ರಚಿಸಿದ್ದಾನೆ. ಈ ಗ್ರಂಥರತ್ನವನ್ನು ಆಂಧ್ರದೇಶಪ್ರಸಿದ್ಧರಾದ ಮ॥ ರಾ॥ ಕೊಮಾರ್ರಾಜು ಲಕ್ಷ್ಮಣರಾವು ಎಂ. ಎ., ಎಂಬವರು ಆಂಧ್ರಸಾಹಿತ್ಯಪರಿಷತ್ತಿನ ಪರವಾಗಿ ಪರಿಶೋಧನೆಮಾಡಿ ಮುದ್ರಿಸಿ ಪ್ರಕಾಶಪಡಿಸಿದ್ದಾರೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ ಶಿವತತ್ತ್ವಸಾರಗ್ರಂಥದಲ್ಲಿ—

ಒಕ್ಕಡೆ ದೈವಮು ಶಿವು ಡನಿ
ನಿಕ್ಕಮು ಸೇಯುಟಕು ಮುಡಿಚೆ ನಿಪ್ಪುಲು ಚೀರನ್।
ಸ್ರುಕ್ಕಕ ಶ್ರೀಪತಿಪಂಡಿತು
ಡಕ್ಕಜಮುಗ ವಿಜಯವಾಡ ನಲಜನ್ಮಿ ಶಿವಾ ॥೪೦೬॥

ಶ್ರೀಪತಿಪಂಡಿತಾರಾಧ್ಯರು ವಿಜಯವಾಡ (ಬಿಜವಾಡ)ದಲ್ಲಿ ಶಿವನೋರ್ವನೇ ದೈವವೆಂಬುದನ್ನು ಸ್ಥಾಪಿಸುವದಕ್ಕೋಸ್ಕರ ವಸ್ತ್ರದಲ್ಲಿ ಬೆಂಕಿಯನ್ನು ಕಟ್ಟಿ ಮಹಾಶ್ಚರ್ಯವನ್ನುಂಟುಮಾಡಿದರೆಂದು, ಈ ಮಹಾತ್ಮರ ಮಹಿಮೆ

ಯನ್ನು ಬಣ್ಣಿಸಿದ್ದಾನೆ. ಇದರಿಂದ ಮಲ್ಲಿಕಾರ್ಜುನಪಂಡಿತನಿಗಿಂತಲೂ ಶ್ರೀಪತಿಪಂಡಿತರು ಪ್ರಾಚೀನರೆಂದು ಸಿದ್ಧವಾಗುವುದಷ್ಟೆ !

ಶ್ರೀಪತಿಪಂಡಿತಾರಾಧ್ಯರು ಯಾವ ಅನಂತಪಾಲರಾಜನ ಆಸ್ಥಾನದಲ್ಲಿ ತಮ್ಮ ಅದ್ಭುತ ಮಹಿಮೆಯನ್ನು ತೋರಿಸಿದರೋ, ಆ ಅನಂತಪಾಲರಾಜನು ೧೧ ನೆಯ ಶತಮಾನದಲ್ಲಿ ಚಾಳುಕ್ಯತ್ರಿಭುವನಮಲ್ಲದೇವನ ಸಾಮಂತರಾಜನಾಗಿದ್ದು, ಬನವಾಸಿ ಮೊದಲಾದ ಕನ್ನಡ ಪ್ರಾಂತಗಳನ್ನೂ, ಮೈಸೂರು ಸೀಮೆಯ ಕೆಲವು ಭಾಗಗಳನ್ನೂ, ಗೋದಾವರಿ, ಗುಂಟೂರು, ಬಿಜವಾಡ, ಕಡಪಾ, ಕರ್ನೂಲು ಮೊದಲಾದ ಆಂಧ್ರ ಪ್ರಾಂತಗಳನ್ನೂ ಆಳುತ್ತಿದ್ದನೆಂಬ ವಿಷಯವು ಶಿಲಾಶಾಸನಗಳಿಂದ ಗೊತ್ತಾಗುತ್ತದೆ. **Inscriptions of Madras Presidency Vol. II** ಈ ಪುಸ್ತಕದಲ್ಲಿರುವ ಗುಂಟೂರು ಡಿಸ್ಟ್ರಿಕ್ಟಿನ ೩೦೫ ನೆಯ ನಂಬರಿನ ಶಾಸನದಲ್ಲಿಯೂ, ಕರ್ನೂಲು ಡಿಸ್ಟ್ರಿಕ್ಟಿನ ೩೫೧ ನೆಯ ನಂಬರಿನ ಶಾಸನದಲ್ಲಿಯೂ, ಈ ರಾಜನ ವಿಷಯವು ಉಕ್ತವಾಗಿದೆ. ಪೂರ್ವಗೋದಾವರಿ ಡಿಸ್ಟ್ರಿಕ್ಟ್ ದ್ರಾಕ್ಷಾರಾಮಕ್ಷೇತ್ರದಲ್ಲಿರುವ ಭೀಮೇಶ್ವರದೇವಸ್ಥಾನದಲ್ಲಿರುವ ಒಂದು ಶಾಸನದಲ್ಲಿ, ಈ ರಾಜನ ವಿಷಯವು ಉಕ್ತವಾಗಿದೆ. ಈ ಶಾಸನವು ಕನ್ನಡಭಾಷೆಯುಲ್ಲಿದ್ದು, **"South Indian Inscriptions Govt. of India" Vol IV 488-89** ನೆಯ ಪುಟಗಳಲ್ಲಿ ಮುದ್ರಿಸಲ್ಪಟ್ಟಿದೆ. ಇದಲ್ಲದೆ ಮಿ॥ ಬಿ. ಲೂಯಿ ರೈಸ್ ಸಾಹೇಬರವರು ಮೈಸೂರು ಗವರ್ನಮೆಂಟಿನ ಪರವಾಗಿ ಶೋಧಿಸಿ ಮುದ್ರಿಸಿರುವ **"Ephigraphia Carnatica" Vol. VII** ಶಿವಮೊಗ್ಗಾ ಡಿ॥ ಶಿಕಾರಿಪುರ ತಾಲೂಕಿನ ೧೩-೯೮-೯೯-೧೩೧-೧೪೯ ನೆಯ ಶಾಸನಗಳಲ್ಲಿ ಈ ಅನಂತಪಾಲರಾಜನ ವಿಷಯವು ಬಹು ವಿಶದವಾಗಿ ಪ್ರತಿಪಾದಿಸಲ್ಪಟ್ಟಿದೆ. ಈ ಸಮಸ್ತ ಶಾಸನಗಳು ಅನಂತಪಾಲರಾಜನು ೧೧ ನೆಯ ಶತಮಾನದ ಅಂತ್ಯದಲ್ಲಿದ್ದನೆಂಬುದನ್ನು ಸ್ಪಷ್ಟಪಡಿಸುತ್ತವೆ.

ಮದ್ರಾಸಿನಲ್ಲಿ ಸುಪ್ರಸಿದ್ಧ ತತ್ತ್ವಶಾಸ್ತ್ರಜ್ಞರೂ ಇತಿಹಾಸಜ್ಞರೂ ಆಗಿರುವ ಮ॥ ರಾ॥ ಟಿ. ಎಸ್. ನಾರಾಯಣಶಾಸ್ತ್ರಿಗಳು, ಬಿ.ಎ.ಬಿ.ಎಲ್., ಮಹಾಶಯರು ೧೯೧೫ ನೆಯ ಇಸ್ವಿ ಮೇ ತಿಂಗಳಲ್ಲಿ–"ದಿ ಇಂಡಿಯನ್ ರಿವ್ಯೂ" ಎಂಬ ಜಗದ್ವಿಖ್ಯಾತವಾದ ಇಂಗ್ಲಿಷ್ ಮಾಸಪತ್ರಿಕೆಯಲ್ಲಿ "**The Five Great Schools of Vedanta Philosophy**" ಎಂಬ ಹೆಸರಿನಿಂದ ಅಮೂಲ್ಯವಾದ ಲೇಖವನ್ನು ಬರೆದು ಪ್ರಸಿದ್ಧಪಡಿಸಿರುವರು. ಈ ಮಹಾಶಯರು ತಮ್ಮ ಲೇಖದಲ್ಲಿ—ಬ್ರಹ್ಮಸೂತ್ರಗಳ ಮೇಲೆ ಒಟ್ಟು ೧೧ ಜನ ಆಚಾರ್ಯರು ಭಾಷ್ಯಗಳನ್ನು ಬರೆದಿರುವರೆಂದೂ, ಆ ೧೧ ಜನ ಆಚಾರ್ಯರಲ್ಲಿ "ಶಂಕರ-ಶ್ರೀಕಂಠ-ರಾಮಾನುಜ-ಶ್ರೀಪತಿ-ಮಧ್ವ" ಎಂಬ ಐದು ಜನ ಆಚಾರ್ಯರು ರಚಿಸಿರುವ ಭಾಷ್ಯಗಳೇ ಮುಖ್ಯವಾದವುಗಳೆಂದೂ, ಶ್ರೀಪತಿಪಂಡಿತರು ಕ್ರಿ. ಶ. ೧೦೭೨ ರಲ್ಲಿ ಜನ್ಮವೆತ್ತಿದರೆಂದೂ ಉಲ್ಲೇಖಿಸಿದ್ದಾರೆ. ಈ ಮಹಾಶಯರು ಈ ಐದು ಜನ ಆಚಾರ್ಯರ ಕಾಲವನ್ನು ಕುರಿತು ಈ ಕೆಳಗೆ ಉದಾಹರಿಸಿರುವಂತೆ ಬರೆದಿದ್ದಾರೆ.

Of these eleven Schools of Vedanta Philosophy, those of **Shankara, Srikantha, Ramanuja, Srikara** and **Madhwa** are the most important and constitute the Five Great Schools of Vedanta Philosophy. Of these, Shankara belongs to the end of the 6th Century B. C. (born 509 B. C.) Srikantha was a contemporary of the Second Great Shankara, the 38th Acharya or successor of Adi Shankara who was born in 788 A.D., and who is unfortunately mistaken for Adi Shankara and belongs to the latter part of the 8th

Century A.D. Ramanuja belongs to the earlier part of the 11th Century A.D. (born 1017 A.D.) Srikara and Madhwa respectively belong to the latter half of the 11th century and the earlier half of the 12th Century A.D. (**Srikara** having been born in **1072** A.D., and Madhwa in 1119 A.D.)

ಇತ್ಯಾದಿ ವಿಷಯಗಳನ್ನು ವಿಮರ್ಶಿಸಿದರೆ ಶ್ರೀಪತಿಪಂಡಿತಾರಾಧ್ಯರು ಕ್ರಿ.ಶ. ೧೧ನೆಯ ಶತಮಾನದಲ್ಲಿದ್ದರೆಂಬುದು ಸರ್ವರಿಗೂ ಕನ್ನಡಿಯಂತೆ ಸ್ಪಷ್ಟವಾಗಿ ತೋರುತ್ತದೆ.

---

## ಶ್ರೀಪತಿಪಂಡಿತಾರಾಧ್ಯರ ಬಗ್ಗೆ ಶಿಲಾಶಾಸನ

ಮದ್ರಾಸ್ ಗವರ್ನಮೆಂಟ್ ಶಾಸನ ಇಲಾಖೆಯವರಿಗೆ ೧೯೦೯ ನೆಯ ಇಸ್ವಿಯಲ್ಲಿ ಬಿಜವಾಡದ ಮಲ್ಲೇಶ್ವರ ದೇವಾಲಯದಲ್ಲಿ ಒಂದು ಶಾಸನವು ದೊರೆತಿರುವದು. (M.E.R. 536 of 1909) ಈ ಶಾಸನದ ಕಲ್ಲು ಪೂರ್ತಿಯಾಗಿರದೆ ಅರ್ಧಕ್ಕೆ ಒಡೆದುಹೋಗಿರುವದು. ಈ ಶಾಸನವು ಶ್ರೀಪತಿಪಂಡಿತಾರಾಧ್ಯರು ಕ್ರಿ.ಶ. ೧೧ ನೆಯ ಶತಮಾನದಲ್ಲಿದ್ದರೆಂಬು ದನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತಿರುವದು. ಈ ಶಾಸನವನ್ನು ವೆಂಗಿ ದೇಶದ ಚಾಲುಕ್ಯರ ಸಾಮಂತರಾಜನಾಗಿದ್ದ "ಪಲ್ಲಕೇತ"ನೆಂಬ ರಾಜನು ಬರೆಯಿಸಿರುವನು. ಶಾಸನದ ಪ್ರಾರಂಭದಲ್ಲಿ "ಮಲ್ಲೇಶ್ವರ" ದೇವರ ಮಹಿಮೆಯು ೯ ಸಂಸ್ಕೃತಶ್ಲೋಕಗಳಲ್ಲಿ ಬಹುಮನೋಹರವಾಗಿ ವರ್ಣಿಸಲ್ಪಟ್ಟಿದೆ. ಈ ಸಂದರ್ಭದಲ್ಲಿಯೇ ಶ್ರೀಪತಿಪಂಡಿತಾರಾಧ್ಯರು ತೋರಿಸಿದ ಅಗ್ನಿಸ್ತಂಭನಮಹಿಮೆಯು ವರ್ಣಿತವಾಗಿದೆ. ಆ ಶಾಸನದಲ್ಲಿ ಈ ಮುಂದೆ ಉಲ್ಲೇಖಿಸಿರುವ ಶ್ಲೋಕಗಳು ಕೆತ್ತಲ್ಪಟ್ಟಿರುವವು.

ವಿತಸ್ತಿವಿಸ್ತೃತೇನಾಪಿ ಸರ್ವೈಸ್ತುಲಿತತೇಜಸಾ ।
ಪೀತಾಶೇಷಾಬ್ಧಿತೋಯೇನ ಕುಂಭಜೇನಾಪ್ಯಗಸ್ತಿನಾ ॥
ಪೂರ್ವಂ ಕೃತಂ ಜಯೇಶಾನನಾಮಾಪಿ ತದನಂತರಂ ।
ಆರಾಧ್ಯ ಮಲ್ಲಯುದ್ಧೇನ ಫಲ್ಗುನೇನ ಕೃತಾಭಿಧಃ ॥
ಮಲ್ಲೇಶ್ವರ ಇತಿ ಖ್ಯಾತಃ ಸನ್ನಿಧತ್ತೇ ಮಹೇಶ್ವರಃ ।
ಶ್ರೀಮದ್ವಿಜಯವಾಟಾಖ್ಯಪುರೇ ಕೃಷ್ಣಾವಿಭೂಷಣೇ ॥
ಕಲೌ ಶ್ರೀಮಚ್ಛಕಾಬ್ದೇಽಬ್ಧಿಶಶಿಸಾಯಕಸಮ್ಮಿತೇ ।
ರಾಜಾ ಮಾಧವವರ್ಮಾಽಭೂದ್ವಿಖ್ಯಾತೋ ಧರಣೀತಲೇ ॥
ತತಃ ಸ್ವಪುತ್ರೇಣ ಹತೇ ತಿಂತ್ರಿಣೀಜೀವಿನೀಸುತೇ ।
ಧರ್ಮಸಂರಕ್ಷಣಾರ್ಥಾಯ ಸ್ವಪುತ್ರಮವಧೀತ್ ಸ ರಾಟ್ ॥
ತತೋ ಮಲ್ಲೇಶ್ವರಃ ಪ್ರೀತಃ ಸ್ವರ್ಣವೃಷ್ಟಿಂ ವವರ್ಷ ಚ ।
ಶಿಶುಪುತ್ರಕಯೋಃ ಪ್ರಾಣಂ ದತ್ತವಾಂಸ್ತಸ್ಯ ಕೀರ್ತಯೇ ॥
ತತಃ ಶ್ರೀಪಂಡಿತಾರಾಧ್ಯನಾಮ್ನಾ ಭಕ್ತೋತ್ತಮೇನ ಚ ।
ಶಿವಭಕ್ತ ಏವ ನೂನಂ ದೇವರ್ಷಿಭ್ಯೋಽಧಿಕ ಇತಿ ॥
ಚೀನಾಂಬರೇಽಗ್ನಿಂ ಸಂಸ್ಥಾಪ್ಯ ಶಮೀಕೋಮಲಶಾಖಯಾ।
ಬದ್ಧೇ ಮಲ್ಲೇಶ್ವರಃ ಪ್ರೀತಃ ಪ್ರತ್ಯಕ್ಷಃ ಸಮಜಾಯತ ॥
ಈದೃಗ್ವಿಧಂ ಮಹಾದೇವಂ ಭಕ್ತವತ್ಸಲಮವ್ಯಯಂ ।
ಮಲ್ಲೇಶ್ವರಂ ಸಮಾರಾಧ್ಯ ರೇಜಿರೇ ಪೃಥಿವೀಭುಜಃ ॥

"ಹನ್ನೆರಡು ಅಂಗುಲ ಎತ್ತರವುಳ್ಳವನಾಗಿದ್ದರೂ, ಸಮಸ್ತಸಮುದ್ರಗಳನ್ನು ಪಾನಮಾಡಿದ ಅಗಸ್ತ್ಯಮಹರ್ಷಿಯು ಪೂರ್ವದಲ್ಲಿ ಈ ಶಿವಲಿಂಗಕ್ಕೆ "ಜಯೇಶಾನ" ಎಂಬ ಹೆಸರನ್ನಿಟ್ಟನೆಂದೂ, ಆ ಮೇಲೆ ಅನೇಕ ವರ್ಷಗಳು ಕಳೆದನಂತರ ಅರ್ಜುನನು ಪರಮೇಶ್ವರನೊಡನೆ ಮಲ್ಲಯುದ್ಧವನ್ನು ಮಾಡಿ ಪರಮೇಶ್ವರನನ್ನು ಒಲಿಸಿಕೊಂಡುದುದರಿಂದ ಆ ಸ್ಮಾರಕವಾಗಿ ಕೃಷ್ಣಾನದಿಯ ತೀರದಲ್ಲಿ ವಿರಾಜಿಸುತ್ತಿರುವ ಬೆಜವಾಡದಲ್ಲಿ "ಮಲ್ಲೇಶ್ವರ" ಎಂಬ ಹೆಸರಿನಿಂದ ಪ್ರಸಿದ್ಧನಾದನೆಂದೂ, ಶಾಲಿ

ವಾಹನಶಕ ೫೧೪ (ಕ್ರಿ. ಶ. ೫೯೨) ರಲ್ಲಿದ್ದ ಮಾಧವವರ್ಮನೆಂಬ ರಾಜನ ಮಗನನ್ನು, ಹುಣಸೆಗಿಡದ ಎಲೆಯನ್ನು ಮಾರಿಕೊಂಡು ಉಪಜೀವಿಸುತ್ತಿದ್ದ ಒಬ್ಬ ಬಡವಿಯ ಮಗನನ್ನು ಕೊಂದುದರಿಂದ, ಆ ಮಾಧವವರ್ಮಮಹಾ ರಾಜನು ಧರ್ಮರಕ್ಷಣೆಗಾಗಿ ತನ್ನ ಮಗನಿಗೆ ಮರಣಶಿಕ್ಷೆಯನ್ನು ವಿಧಿಸಿದ ನೆಂದೂ, ಮಲ್ಲೀಶ್ವರನು ಆ ರಾಜನ ಧರ್ಮಬುದ್ಧಿಗೆ ಮೆಚ್ಚಿ ರಾಜನ ಮಗನಿಗೂ ಬಡವಿಯ ಮಗನಿಗೂ ಪ್ರಾಣದಾನವನ್ನು ಮಾಡಿ ಸ್ವರ್ಣವೃಷ್ಟಿ ಗರೆದನೆಂದೂ, ಇದಾದ ಕೆಲವು ದಿವಸಗಳಮೇಲೆ, ಶ್ರೀಪಂಡಿತಾರಾಧ್ಯನು ಅಲ್ಲಿಗೆ ಬಂದು ದೇವರ್ಷಿಗಳಿಗಿಂತಲೂ ಶಿವಭಕ್ತರೇ ಶ್ರೇಷ್ಠರೆಂದು ಸಾರಿ, ಅತ್ಯಂತ ಸೂಕ್ಷ್ಮವಾದ ಚೀನಾದೇಶದ ಬಟ್ಟೆಯಲ್ಲಿ ಬೆಂಕಿಯನ್ನಿಟ್ಟು ಅದನ್ನು ಬನ್ನಿಯಮರಕ್ಕೆ ಕಟ್ಟಿ ಅಗ್ನಿಸ್ತಂಭನವನ್ನು ಮಾಡಿದನೆಂದೂ, ಈ ವಿಧವಾದ ಮಹಿಮೆಯನ್ನು ನೋಡಿ ಮಲ್ಲೀಶ್ವರನು ಶ್ರೀಪಂಡಿತಾರಾಧ್ಯ ನಿಗೆ ಪ್ರತ್ಯಕ್ಷನಾದನೆಂದೂ, ಇಂತಹ ಭಕ್ತವತ್ಸಲನಾದ ಮಲ್ಲೀಶ್ವರನನ್ನು ಪೂರ್ವದಲ್ಲಿ ಅನೇಕರಾಜರು ಸೇವಿಸಿ ಧನ್ಯರಾದರೆಂದೂ ಈ ಶ್ಲೋಕಗಳ ಅಭಿಪ್ರಾಯವಾಗಿರುವುದು."

ಈ ಶಾಸನದಲ್ಲಿ ವರ್ಣಿತವಾಗಿರುವ ಮಲ್ಲೀಶ್ವರನ ಮಹಿಮೆಯೆಲ್ಲವೂ, ಈ ಶಾಸನವನ್ನು ಬರೆಯಿಸಿದ ಪಲ್ಲಕೇತರಾಜನ ಕಾಲಕ್ಕಿಂತ ಮೊದಲೇ ನಡೆದುಹೋದುದೆಂಬುದು ಈ ಪದ್ಯಗಳಿಂದಲೇ ಗೊತ್ತಾಗುವುದು. ತನಗಿಂತಲೂ ಪೂರ್ವದಲ್ಲಿ ನಡೆದು ಹೋಗಿರುವ ಈ ಎಲ್ಲ ಚರಿತ್ರವನ್ನು ಆ ರಾಜನು ತನ್ನ ಶಾಸನದ ಪ್ರಾರಂಭದಲ್ಲಿ ಕೆತ್ತಿಸಿ, ತಾನು ಇಂತಹ ಮಲ್ಲೀಶ್ವರಸ್ವಾಮಿಯ ಭಕ್ತನೆಂದು ಶಾಸನದಲ್ಲಿ ಹೇಳಿಕೊಂಡಿದ್ದಾನೆ.

ಈ ಶಾಸನದಲ್ಲಿ ಪಲ್ಲಕೇತಮಹಾರಾಜನ ವಂಶವಿಷಯವೂ, ಈತನ ಶೌರ್ಯ-ಧೈರ್ಯಾದಿವಿಷಯಗಳೂ ವರ್ಣಿಸಲ್ಪಟ್ಟಿವೆ. ಈ ಶಾಸನದಲ್ಲುಕ್ತ ವಾಗಿರುವ "ಶ್ರೀಬೆಜವಾಡಮಲ್ಲೀಶ್ವರದೇವದಿವ್ಯಶ್ರೀಪಾದಪದ್ಮಾ ರಾಧಕ" "ಶ್ರೀವೆಂಗಿದೇಶಚಾಳುಕ್ಯನಂಕಕಾರ" "ಶ್ರೀಮನ್ಮಹಾ ಮಂಡಲೇಶ್ವರ ಪಲ್ಲಕೇತಭೂಪಾಲುಂಡು" ಇತ್ಯಾದಿವಾಕ್ಯಗಳನ್ನು

ವಿಮರ್ಶಿಸಿದರೆ, ಈ ರಾಜನು ಬೆಜವಾಡ ಮಲ್ಲೇಶ್ವರನ ಪರಮಭಕ್ತನೆಂದೂ, ಚಾಳುಕ್ಯರ ಸಾಮಂತರಾಜನೆಂದೂ ಸ್ಪಷ್ಟವಾಗುತ್ತದೆ.

ಈ ಶಾಸನದಲ್ಲಿ ಪಲ್ಲಕೇತರಾಜನು ಚಾಲುಕ್ಯರ ಮಂಡಲಿಕನಾಗಿದ್ದನೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವದರಿಂದ, ಈ ರಾಜನು ಪಶ್ಚಿಮ ಚಾಲುಕ್ಯರು ಏಕಚ್ಛತ್ರಾಧಿಪತ್ಯದಿಂದ ರಾಜ್ಯವಾಳುತ್ತಿದ್ದಾಗ್ಗೆ, ಅವರಿಗೆ ಆಶ್ರಿತನಾಗಿದ್ದನೆಂದು ವ್ಯಕ್ತವಾಗುತ್ತದೆ. ಪಶ್ಚಿಮಚಾಲುಕ್ಯರು ಕ್ರಿ. ಶ. ೧೧೮೦ ರ ವರೆಗೆ ದಕ್ಷಿಣದೇಶವನ್ನಾಳಿದರೆಂಬ ವಿಷಯವು ಇತಿಹಾಸ ಪ್ರಸಿದ್ಧವೇ ಅದೆ. ಅಲ್ಲಿಗೆ ಅವರ ಸಂತತಿಯು ನಷ್ಟವಾಯಿತು.

ಪಲ್ಲಕೇತರಾಜನು ಶ್ರೀಪತಿಪಂಡಿತಾರಾಧ್ಯರು ಪೂರ್ವಕಾಲದಲ್ಲಿ ತೋರಿಸಿದ ಮಹಿಮೆಯ ಚರಿತ್ರವನ್ನು, ಅಗಸ್ತ್ಯ-ಅರ್ಜುನ-ಮಾಧವ ವರ್ಮರಾಜರ ಚರಿತ್ರದಂತೆ ತನ್ನ ಶಾಸನದಲ್ಲಿ ಉಲ್ಲೇಖಿಸಬೇಕಾದರೆ, ಶ್ರೀಪತಿಪಂಡಿತಾರಾಧ್ಯರು ಈ ರಾಜನಿಗಿಂತ ನೂರಾರುವರ್ಷಗಳ ಪೂರ್ವದಲ್ಲಿಯೇ ಈ ಮಹಿಮೆಯನ್ನು ತೋರಿಸಿರಬೇಕೆಂಬ ವಿಷಯವು ಚಿಕ್ಕ ಮಕ್ಕಳಿಗೂ ಸಹ ತಿಳಿಯುವಂತಿದೆ. ಆದುದರಿಂದ ಶ್ರೀಪತಿಪಂಡಿತಾರಾಧ್ಯರು ೧೧ನೆಯ ಶತಮಾನದಲ್ಲಿ ಈ ಭೂಮಂಡಲದಲ್ಲಿ ಅವತರಿಸಿದರೆಂಬ ವಿಷಯವು ನಿರ್ವಿವಾದವಾದುದು.

## ಶ್ರೀಪತಿಪಂಡಿತಾರಾಧ್ಯರು ಅಗ್ನಿಸ್ತಂಭನಮಾಡುವುದಕ್ಕೆ ಕಾರಣ.

ಶ್ರೀಪತಿಪಂಡಿತಾರಾಧ್ಯರ ಸಾಂಪ್ರದಾಯಿಕರಾದ "ಕಾಶೀನಾಥುನಿ ವೀರಾರಾಧ್ಯ"ರೆಂಬವರು ಪೂರ್ವದಲ್ಲಿ "ಧರ್ಮಗುಪ್ತಾಭ್ಯುದಯ"ವೆಂಬ ಗ್ರಂಥವನ್ನು ಆಂಧ್ರಭಾಷೆಯಲ್ಲಿ ಬರೆದಿರುವರು. ಆ ಗ್ರಂಥದಲ್ಲಿ— ಶ್ರೀಪತಿಪಂಡಿತಾರಾಧ್ಯರು ಮಲ್ಲೇಶ್ವರದೇವಾಲಯದಲ್ಲಿ ತಮ್ಮ ಶಿಷ್ಯನಾದ ಅನಂತಪಾಲರಾಜನ ಸಮ್ಮುಖದಲ್ಲಿ ತೋರಿಸಿದ ಅಗ್ನಿಸ್ತಂಭನಮಹಿಮೆಯೂ, ಅಗ್ನಿಸ್ತಂಭನವನ್ನು ಏಕೆ ಮಾಡಿದರೆಂಬ ವಿಷಯವೂ ವಿಶದವಾಗಿ ಪ್ರತಿಪಾದಿಸಲ್ಪಟ್ಟಿದೆ.

ಶ್ರೀಪತಿಪಂಡಿತಾರಾಧ್ಯರು ಬಿಜವಾಡದಲ್ಲಿ ವಾಸಿಸುತ್ತಿದ್ದರೆಂದೂ, ಆ ಸಮಯದಲ್ಲಿ ಬಿಜವಾಡದಲ್ಲಿ ವಾಸಿಸುತ್ತಿದ್ದ ಅನಂತಪಾಲರಾಜನು ಇವರಿಗೆ ಶಿಷ್ಯನಾಗಿದ್ದನೆಂದೂ, ಇವರು ಪ್ರತಿದಿನವೂ ಭೋಗಶೇಖರ ಮಂದಿರದಲ್ಲಿ ಶಿವನ ಮತ್ತು ಶಿವಭಕ್ತರ ಮಹಿಮೆಯನ್ನು ಪ್ರವಚನ ರೂಪವಾಗಿ ಬೋಧಿಸುತ್ತಿದ್ದರೆಂದೂ, ಇವರು ಬೋಧಿಸುತ್ತಿದ್ದ ಶಿವಭಕ್ತರ ಶ್ರೇಷ್ಠತೆಯನ್ನು ಕೇಳಲಾರದೆ ಪರವಾದಿಗಳು ಇವರನ್ನು ದೂಷಿಸಹತ್ತಿದ ರೆಂದೂ, ಕಡೆಗೆ ಈ ವಿಷಯವು ಅನಂತಪಾಲರಾಜನ ಆಸ್ಥಾನಕ್ಕೆ ಬಂದಿ ತೆಂದೂ, ಅಲ್ಲಿ ಇವರು ಶಾಸ್ತ್ರಾರ್ಥವನ್ನು ಮಾಡಿ ಪರವಾದಿಗಳನ್ನು ಜಯಿಸಿದರೆಂದೂ, ಆದರೂ ಪರವಾದಿಗಳು ಇವರ ಮಾತನ್ನು ಅಂಗೀಕರಿ ಸದೆ ಇವರಿಗೆ ಬೆಂಕಿಯು ಸಹ ಸಿಕ್ಕದಂತೆ ಮಾಡಿದರೆಂದೂ, ಆಗ್ಗೆ ಇವರು ನನ್ನ ಸಿದ್ಧಾಂತವನ್ನು ಖಂಡಿಸದೆ ಸುಮ್ಮನೆ ಬೆಂಕಿಯನ್ನು ಕೊಡದಂತೆ ಅಡ್ಡಿಪಡಿಸಿರುವುದು ಪೌರುಷವಲ್ಲವೆಂದು ನುಡಿಯುತ್ತ, ಪ್ರಲಯಾಗ್ನಿ ಯಂತೆ ಕೋಪಾವಿಷ್ಟರಾಗಿ ಆರ್ಭಟಿಸುತ್ತ, ಮಲ್ಲೇಶ್ವರದೇವಾಲಯದ ಆಗ್ನೇಯ ದಿಕ್ಕಿನಲ್ಲಿದ್ದ ಬನ್ನಿಯಮರದ ಬಳಿಗೆ ಹೋಗಿ, ಪ್ರಮಥರ ಸ್ತೋತ್ರವನ್ನು ಮಾಡಿ, ಅಗ್ನಿಯನ್ನು ಆಕರ್ಷಿಸುತ್ತ, ಅದನ್ನು ರೇಶಮಿಯ ವಸ್ತ್ರದಲ್ಲಿ ಕಟ್ಟಿ, "ಎಲೈ ಅಗ್ನಿಯೇ! ನೀನು ಶಿವಭಕ್ತರ ಮನೆಗಳನ್ನು ಬಿಟ್ಟು ಮಿಕ್ಕವರ ಮನೆಗಳಲ್ಲಿ ಇರಕೂಡದು; ಪರವಾದಿಗಳ ಮದವನ್ನು ತಗ್ಗಿಸಬೇಕು; ಶಿವನ ಆಜ್ಞೆಯನ್ನು ಮೀರಿದಾಗ ವೀರಭದ್ರನಿಂದ ನಿನಗಾದ ಶಿಕ್ಷೆಯು ಸ್ಮರಣೆಯಲ್ಲಿರಬಹುದು; ಈ ಬಗ್ಗೆ ನಿನಗೆ ಹೆಚ್ಚಿಗೆ ಹೇಳುವದೇನಿದೆ?" ಎಂದು ನುಡಿಯಲು, ಈ ಮಹಾತ್ಮರ ಅಪ್ಪಣೆ ಯಂತೆ ಪರವಾದಿಗಳಿಗೆ ಒಂದು ವಾರದ ವರೆಗೆ ಅಗ್ನಿಯು ದೊರೆಯದಂ ತಾಯಿತೆಂದೂ, ಆಗ ಪರವಾದಿಗಳು ಅನಂತಪಾಲರಾಜನೊಡನೆ ಬಂದು ಶರಣಾಗತರಾಗಿ ಶಿಷ್ಯತ್ವವನ್ನು ವಹಿಸಿದರೆಂದೂ ಬರೆಯಲ್ಪಟ್ಟಿದೆ. ಗ್ರಂಥ ಕಾರರು ಈ ಚರಿತ್ರವನ್ನು ಅನೇಕ ಗದ್ಯಪದ್ಯಗಳಲ್ಲಿ ಬಹು ಮನೋಹರ

ವಾಗಿ ವರ್ಣಿಸಿದ್ದಾರೆ. ಆ ಗ್ರಂಥದಲ್ಲಿರುವ ಕೆಲವು ವಾಕ್ಯಗಳು ಈ ಕೆಳಗೆ ಉದಾಹರಿಸಲ್ಪಟ್ಟಿವೆ.

ಶಿವುಡೆ ದೈವಮು ಧರಲೊ
ಶಿವಭಕ್ತುಲೆ ಸತ್ಕುಲೀನಸಿದ್ಧಾಂತಪರುಲ್ ।
ಶಿವಮಂತ್ರಮೆ ಮನುರಾಜಮು
ಶಿವುನಿ ಪ್ರಸಾದಂಬೆ ಭೋಗಶೇಖರ ಮರಯನ್ ॥

ಅನಿ ಶಪಥಂಬುಗಾ ಬಲುಕುಚು ನನಂತಪಾಲದಂಡನಾಯಕ ಮಹೀಧವಾದಿಶಿಷ್ಯತತಿಸೇವಾಯತ್ತಚಿತ್ತಂಬುಲಂ ಬ್ರವರ್ತಿಂಪು ಚುಂಡ ಬರವಾದಿಕೋಲಾಹಲುಂಡೈ ಜಯವಾಟೀಪುರಂಬುನ ವಿಜಯಧ್ವಜಂಬೆತ್ತಿ ಮಹೋತ್ತರಶೈವಾಚಾರ್ಯುಂ ಡನಜೆಲಂಗು ಚುಂಡಿ ಯೊಕ್ಕನಾಡು ॥

..........................................................................................

ಇಟ್ಲು ಪರವಾದು ಲಪ್ಪಂಡಿತೇಂದ್ರು ನನಂತಪಾಲದಂಡ ನಾಯಕ ಭೂವರಾಸ್ಥಾನಂಬುನಕು ಗೋನಿಪೋಯಿ ಯಿಟ್ಲನಿರಿ ॥

..........................................................................................

ಅಪ್ಪಂಡಿತೇಂದ್ರುಂಡು ಜಯವಾಟಿಕಾಪುರಮಲ್ಲಿಕಾರ್ಜುನಾ ಗ್ನೇಯಭಾಗಂಬುನ ನುನ್ನ ಶಮೀಶಾಖಿಸಮೀಪಂಬುನಕು ನರಿಗಿ ಯದ್ದೇವುನಕಭಿವಂದನಂಬುನು ಪ್ರಮಥಗಣಸ್ತೋತ್ರಂಬುನು ಗಾವಿಂಚಿ ವೀತಿಹೋತ್ರುನಾಕರ್ಷಿಂಪುಚು ದನಮೀದಿ ಪಟ್ಟು ಪಚ್ಚಡಂಬುನಂ ಗಟ್ಟಿ ಯಿಟ್ಲನಿಯೆ ॥

ಇದೇ ರೀತಿಯಾಗಿ ಅನೇಕ ಗದ್ಯಪದ್ಯಗಳಿಂದ, ಈ ಮಹಾತ್ಮರು ತೋರಿಸಿದ ಮಹಿಮೆಯು ವರ್ಣಿಸಲ್ಪಟ್ಟಿರುವುದು.

ಆಂಧ್ರಸಾಹಿತ್ಯದಲ್ಲಿ ಅಸಾಧಾರಣವಾದ ಕೀರ್ತಿಯನ್ನು ಪಡೆದಿರುವ ಶ್ರೀಪ್ರಭಾಕರಶಾಸ್ತ್ರಿಗಳೆಂಬವರು ೧೯೩೬ನೆಯ ಇಸ್ವಿಯಲ್ಲಿ ಪ್ರಕಟಿಸಿದ ಒಂದು ಲೇಖದಲ್ಲಿ, ಶ್ರೀಪತಿಪಂಡಿತಾರಾಧ್ಯರ ವಿಷಯವನ್ನು ಕೂಲಂಕಷ.

ವಾಗಿ ವಿಮರ್ಶಿಸುತ್ತ, ಈ ಕೆಳಗೆ ಉದಾಹರಿಸಿರುವಂತೆ ತಮ್ಮ ಅಭಿಪ್ರಾಯ ವನ್ನು ವ್ಯಕ್ತಪಡಿಸಿದ್ದಾರೆ.

" ಪಶ್ಚಿಮಚಾಳುಕ್ಯರಾಜಗು ನಾರವ ವಿಕ್ರಮಾದಿತ್ಯುನಿ ಯೊದ್ದ ದಂಡನಾಯಕುಡೈ ಪೆಕ್ಕುರಾಜ್ಯಮುನಲು ಜಯಿಂಚಿನ ಯನಂತಪಾಲುಡು ಕೊಂಡಪಲ್ಲಿನಾಡು ಪಾಲಿಂಚುಚು ಬೆಜವಾಡಲೊ ನುಂಡಗಾ ನೀಶ್ರೀಪತಿಪಂಡಿತುಡಾತನಿಕಿ ಗುರುಡೈಯುಂಡೆನು. ಅನಂತಪಾಲುನಿ ಶಾಸನಮು ಬೆಜವಾಡಕು ಜೆರುವ ಗಾನುನ್ನ ಚೆಬ್ರೋಲಗೂಡ ಗಲದು. ಆತಡು ಕ್ರಿ. ಶ. ೧೦೯೫-೧೧೧೮ ಲೊ ನುಂಡೆನು. "

" ಪಶ್ಚಿಮಚಾಳುಕ್ಯರಾಜನಾಗಿದ್ದ ವಿಕ್ರಮಾದಿತ್ಯನ ದಂಡನಾಯಕನಾದ ಅನಂತಪಾಲನು ಅನೇಕ ರಾಜ್ಯಗಳನ್ನು ಗೆದ್ದು " ಕೊಂಡಪಲ್ಲಿನಾಡು " ರಾಜ್ಯವನ್ನಾಳುತ್ತಿದ್ದನು. ಬಿಜವಾಡದಲ್ಲಿದ್ದ ಶ್ರೀಪತಿಪಂಡಿತಾರಾಧ್ಯರು ಈತನಿಗೆ ಗುರುವಾಗಿದ್ದರು. ಅನಂತಪಾಲರಾಜನ ಶಾಸನವು ಬಿಜವಾಡಕ್ಕೆ ಸಮೀಪದಲ್ಲಿರುವ " ಚೆಬ್ರೋಲ " ಎಂಬ ಗ್ರಾಮದಲ್ಲಿರುವದು. ಅನಂತಪಾಲನು ಕ್ರಿ. ಶ. ೧೦೯೫ ರಿಂದ ೧೧೧೮ ವರೆಗೆ ಇದ್ದನು. "

ಈ ರೀತಿಯಾಗಿ ಸ್ಮಾರ್ತಮತೀಯರಾದ ಪ್ರಭಾಕರಶಾಸ್ತ್ರಿಗಳವರು ಬರೆದು, ಅನಂತಪಾಲರಾಜನೂ ಅವನಿಗೆ ಗುರುವಾಗಿದ್ದ ಶ್ರೀಪತಿಪಂಡಿತಾರಾಧ್ಯರೂ ೧೧ನೆಯ ಶತಮಾನದಲ್ಲಿ ಜನ್ಮಧಾರಣಮಾಡಿದರೆಂಬ ವಿಷಯವನ್ನು ಘಂಟಾಘೋಷವಾಗಿ ಸಾರಿದ್ದಾರೆ.

ಹೀಗೆ ಒಂದಲ್ಲ, ಎರಡಲ್ಲ, ನೂರಾರು ಪ್ರಮಾಣಗಳು ಶ್ರೀಪತಿಪಂಡಿತಾರಾಧ್ಯರು ೧೧ನೆಯ ಶತಮಾನದಲ್ಲಿದ್ದರೆಂದು ಸಾರುತ್ತಿರುವುದರಿಂದ ಈ ಮಹಾತ್ಮರು ೧೧ನೆಯ ಶತಮಾನದಲ್ಲಿದ್ದರೆಂಬುದೇ ಸರ್ವಸಮ್ಮತವಾದ ಸಿದ್ಧಾಂತವು.

# ಲಿಂಗಧಾರಣದ ಪ್ರಾಚೀನತ್ವ

## ಪಲ್ಲವವಂಶದ ಪ್ರಾಚೀನ ರಾಜರು ಲಿಂಗಧಾರಿಗಳಾಗಿದ್ದರೆಂಬ ಬಗ್ಗೆ ಶಿಲಾಶಾಸನಗಳು

---

ಲಿಂಗಧಾರಣಪದ್ಧತಿಯು ಬಹುಪುರಾತನವಾದುದು. ಲಿಂಗಧಾರಣದ ಪ್ರಭಾವವನ್ನು ನಿಗಮಾಗಮಗಳು ಮುಕ್ತಕಂಠದಿಂದ ಸಾರುತ್ತಿರುವವು. ಲಿಂಗಧಾರಣ ಲಿಂಗಪೂಜಾದಿಗಳಿಂದಲೇ ಮೋಕ್ಷವು ಸುಲಭವಾಗಿ ಸಿದ್ಧಿಸುವುದೆಂಬ ಮಹಾತತ್ತ್ವವನ್ನು ಜಗತ್ತಿನ ಜನರಿಗೆ ಬೋಧಿಸಿ, ಈ ಪದ್ಧತಿಯನ್ನು ಪ್ರಚಾರದಲ್ಲಿ ತಂದ ಮಹಾತ್ಮರೆಂದರೆ ಶ್ರೀಜಗದ್ಗುರು ಪಂಚಾಚಾರ್ಯರೆಂಬ ವಿಷಯವು ಶಾಸ್ತ್ರಪ್ರಸಿದ್ಧವೂ ಲೋಕಪ್ರಸಿದ್ಧವೂ ಆಗಿದೆ. ಶಿವಲಿಂಗವು ದೇವತಾಸಾರ್ವಭೌಮನಾದ ಶ್ರೀಪರಮೇಶ್ವರನ ಚಿಹ್ನರೂಪವಾಗಿರುವದು. ಪರಮೇಶ್ವರನು ದೇವತಾಸಾರ್ವಭೌಮನಾಗಿರುವುದರಿಂದಲೇ ಆವನಿಗೆ "ಮಹಾದೇವ" ನೆಂಬ ನಾಮವು ಪ್ರಾಪ್ತವಾಗಿರುವದು. ವಿಷ್ಣು-ಬ್ರಹ್ಮಾದಿ ಸಮಸ್ತ ದೇವತೆಗಳು ಮಹಾದೇವನಾದ ಶಂಕರನ ಧ್ಯಾನ-ಧಾರಣ-ಪೂಜಾದಿಗಳಿಂದಲೇ ಸಕಲ ಸಿದ್ಧಿಗಳನ್ನು ಪಡೆದಿರುವರೆಂಬ ವಿಷಯವನ್ನು ವ್ಯಾಸಮಹರ್ಷಿಗಳು ಸ್ಕಂದಪುರಾಣ-ಶಿವಪುರಾಣ-ಲಿಂಗಪುರಾಣಾದಿಗಳಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಿರುತ್ತಾರೆ.

ವಿಷ್ಣುಬ್ರಹ್ಮಾದಯೋ ದೇವಾ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥೯೬॥

(ಲಿಂಗಪುರಾಣ ಉ ಭಾ. ಅಧ್ಯಾಯ ೨೧)

ವಿಷ್ಣು-ಬ್ರಹ್ಮಾದಿದೇವತೆಗಳೂ, ಗೌತಮಾದಿಮುನಿಗಳೂ ತಮ್ಮ ಮಸ್ತಕದಲ್ಲಿ ಲಿಂಗಧಾರಣವನ್ನು ಮಾಡಿಕೊಂಡಿರುವರೆಂದು ಲಿಂಗಪುರಾಣ

ಉತ್ತರಭಾಗದ ೨೧ನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಭರತಖಂಡದಲ್ಲಿರತಕ್ಕ ಸಮಸ್ತ ಪ್ರಾಚೀನ ದೇವತಾಮೂರ್ತಿಗಳನ್ನು ಶೋಧಕದೃಷ್ಟಿಯಿಂದ ಪರಿಶೀಲಿಸಿದ್ದಾದರೆ, ಪ್ರತಿಯೊಂದು ದೇವತಾ ಮೂರ್ತಿಯ ಹಸ್ತದಲ್ಲಾಗಲಿ, ಮಸ್ತಕದಲ್ಲಾಗಲಿ ಲಿಂಗಧಾರಣವಿದ್ದುದು ಕಂಡುಬರುವುದು. ಭರತಖಂಡದಲ್ಲಿ ಅತ್ಯಂತ ಪ್ರಸಿದ್ಧವೆನಿಸಿರುವ ಪಂಢರಪುರದಲ್ಲಿರುವ ವಿಠೋಬ ನಾಮಕವಾದ ವಿಷ್ಣುಮೂರ್ತಿಯ ಮಸ್ತಕದಲ್ಲಿಯೂ, ಬಾರ್ಸಿಪಟ್ಟಣದಲ್ಲಿ ವಿರಾಜಿಸುತ್ತಿರುವ ಭಗವಂತ ನಾಮಕ ವಿಷ್ಣುಮೂರ್ತಿಯ ಮಸ್ತಕದಲ್ಲಿಯೂ, ಅನಂತಶಯನ ರಾಜಧಾನಿ ಯಲ್ಲಿರುವ ಅನಂತಪದ್ಮನಾಭಮೂರ್ತಿಯ ಹಸ್ತದಲ್ಲಿಯೂ, ಬಳ್ಳಾರಿ ಡಿ|| ನರಸಿಂಹದೇವರ ಗುಡ್ಡದಲ್ಲಿ ಶೋಭಿಸುವ ನೃಸಿಂಹಮೂರ್ತಿಯ ಹಸ್ತದಲ್ಲಿಯೂ ಲಿಂಗಧಾರಣವಿರುವುದು ಲೋಕಪ್ರಸಿದ್ಧವೇ ಅದೆ.

ಲಕ್ಷ್ಮ್ಯಾದಿಶಕ್ತಯಸ್ಸರ್ವಾಃ ಶಿವಭಾವವಿಭಾವಿತಾಃ ।
ಧಾರಯಂತ್ಯಲಿಕಾಗ್ರೇಷು ಶಿವಲಿಂಗಮಹರ್ನಿಶಂ ॥೫೬॥
(ಸಿ ಶಿ. ಪರಿಚ್ಛೇದ ೬)

ಲಕ್ಷ್ಮಿ ಮೊದಲಾದ ಸಮಸ್ತ ಶಕ್ತಿಗಳೂ ಸಹ ಲಿಂಗಧಾರಣ ಯುತೆಯರಾಗಿರುವರೆಂದು ಸಿದ್ಧಾಂತಶಿಖಾಮಣಿಯಲ್ಲಿ ಶ್ರೀ ರೇಣುಕಾ ಚಾರ್ಯರು ಸ್ಪಷ್ಟವಾಗಿ ಅಪ್ಪಣೆಕೊಡಿಸಿರುತ್ತಾರೆ. ಈ ವಿಷಯದಲ್ಲಿ ಶಕ್ತಿಪೀಠಗಳಲ್ಲಿ ಅತ್ಯಂತ ಪ್ರಸಿದ್ಧವಾಗಿರುವ ಕೊಲ್ಲಾಪುರದ ಮಹಾ ಲಕ್ಷ್ಮಿಯ ಮಸ್ತಕದಲ್ಲಿಯೂ, ಕಾಶ್ಮೀರದೇಶದ ಶಾರದಾದೇವಿಯ ಮಸ್ತಕದಲ್ಲಿಯೂ, ತುಳಜಾಪುರ ಭವಾನಿಯ ಮಸ್ತಕದಲ್ಲಿಯೂ, ಕಾಂಚೀ ಕಾಮಾಕ್ಷಿಯ ಮಸ್ತಕದಲ್ಲಿಯೂ, ಕಾಶೀ ವಿಶಾಲಾಕ್ಷಿಯ ಮಸ್ತಕದಲ್ಲಿಯೂ ಈಗಲೂ ಪರಿಶೋಭಿಸುತ್ತಿರುವ ಲಿಂಗಧಾರಣವೇ ಬಲವಾದ ಸಾಕ್ಷಿಯಾಗಿದೆ. ಈ ಸಕಲಶಾಸ್ತ್ರೀಯಪ್ರಮಾಣಗಳಿಂದಲೂ, ಈ ಪ್ರಮಾಣಗಳಿಗನುಗುಣವಾಗಿ ಈಗಲೂ ಲೋಕದಲ್ಲಿ ಸರ್ವರ

ಕಣ್ಣೆದುರಿಗೆ ಪ್ರತ್ಯಕ್ಷವಾಗಿ ತೋರುತ್ತಿರುವ ಚಿಹ್ನಗಳಿಂದಲೂ, ಶಿವಲಿಂಗ ಧಾರಣವು ದೇವಾನುದೇವತೆಗಳಿಗೂ ಸಹ ಮಾನ್ಯವಾಗಿರುವುದೆಂಬುದು ಸ್ಪಷ್ಟವಾಗುವದು.

ಭರತಖಂಡದಲ್ಲಿ ತಮ್ಮ ತಪಃಪ್ರಭಾವದಿಂದಲೂ ಜ್ಞಾನಪ್ರಭಾವ ದಿಂದಲೂ, ವೈರಾಗ್ಯಪ್ರಭಾವದಿಂದಲೂ ಅಸಾಧಾರಣವಾದ ಕೀರ್ತಿಯನ್ನು ಸಂಪಾದಿಸಿಕೊಂಡು, ಇಂದಿನವರೆಗೂ ಕೀರ್ತಿಕಾಯರಾಗಿ ಪ್ರಕಾಶಿಸುತ್ತಿರುವ **ಅಗಸ್ತ್ಯ, ಗೌತಮ, ದೂರ್ವಾಸ, ದಧೀಚಿ, ಸಾನಂದ, ವ್ಯಾಸ, ಉಪಮನ್ಯು, ಹರಕಂತ** ಮೊದಲಾದ ಅಸಂಖ್ಯಜನ ಮಹರ್ಷಿಗಳೂ, ನಲ-ಕಕುತ್ಸ-ಪುರೂರವ ಮೊದಲಾದ ಚಕ್ರವರ್ತಿಗಳೂ ಲಿಂಗಧಾರಣ ಮಹಿಮೆಯನ್ನರಿತು ಶ್ರೀಜಗದ್ಗುರು ಪಂಚಾಚಾರ್ಯರ ಪಾದಾರವಿಂದಂ ಗಳನ್ನಾಶ್ರಯಿಸಿ, ಶಿವಲಿಂಗಧಾರಣವನ್ನು ಪಡೆದು, ಅವರಿಂದ ಲಿಂಗಾಂಗ ಸಾಮರಸ್ಯರೂಪವಾದ ಜ್ಞಾನವನ್ನು ಸಂಪಾದಿಸಿಕೊಂಡು ಮುಕ್ತರಾಗಿರುವ ವಿಷಯವು, **ಪಾಶುಪತತಂತ್ರ, ಕಾಶೀಖಂಡ, ಸಿದ್ಧಾಂತಶಿಖಾಮಣಿ, ಶಂಕರಸಂಹಿತಾ** ಮೊದಲಾದ ಗ್ರಂಥಗಳಲ್ಲಿ ಚನ್ನಾಗಿ ವರ್ಣಿಸಲ್ಪಟ್ಟಿದೆ. ಈ ಎಲ್ಲ ವಿಷಯಗಳನ್ನೂ ವಿಮರ್ಶಿಸಿ ನೋಡಿದರೆ ಲಿಂಗಧಾರಣ ಪದ್ಧತಿಗೆ ಶ್ರೀ ಜಗದ್ಗುರು ಪಂಚಾಚಾರ್ಯರೇ ಮೂಲಕಾರಣರೆಂಬ ವಿಷಯವು ಸ್ಪಷ್ಟವಾಗುವದು. ಈ ಪೂಜ್ಯಪಾದರು ಶಿವಲಿಂಗವನ್ನು ಉತ್ತಮಾಂಗ (ಮಸ್ತಕ) ದಲ್ಲಿ ಧರಿಸುವುದೇ ಶ್ರೇಷ್ಠವೆಂದು ಸಾರಿರುವರು.

ಆದುದರಿಂದಲೇ ಸಮಸ್ತ ದೇವತಾಮೂರ್ತಿಗಳ ಮಸ್ತಕದಲ್ಲಿ ಶಿವಲಿಂಗಧಾರಣವು ವಿರಾಜಿಸುತ್ತಿರುವದು. ಪ್ರಾಚೀನಕಾಲದ ಮಹರ್ಷಿ ಗಳೂ ಚಕ್ರವರ್ತಿಗಳೂ ಧರ್ಮಶಾಸ್ತ್ರಾನುಸಾರವಾಗಿ ಮಸ್ತಕದಲ್ಲಿಯೇ ಲಿಂಗಧಾರಣವನ್ನು ಮಾಡಿಕೊಳ್ಳುತ್ತಿದ್ದರು. ಈ ವಿಷಯವು ಪಲ್ಲವ ವಂಶದ ರಾಜರ ವಿಷಯಕವಾಗಿರುವ ಪ್ರಾಚೀನಶಿಲಾಶಾಸನಗಳಿಂದ ತಿಳಿದುಬರುತ್ತದೆ.

# ಪ್ರಾಚೀನ ಶಿಲಾಶಾಸನಗಳು

ಪಲ್ಲವವಂಶದ ರಾಜರು ಪರಮಶಿವಭಕ್ತರೆಂಬುದು ಇತಿಹಾಸ ಪ್ರಸಿದ್ಧವು! ಇವರಲ್ಲಿದ್ದ ಶಿವಭಕ್ತಿಯು ಅಸಾಧಾರಣವಾದುದು. ಈ ವಂಶದ ರಾಜರು ಮಹಾಶೂರರಾಗಿದ್ದು, ಶಾಲಿವಾಹನಶಕದ ಆದಿಯಿಂದಲೂ ದಕ್ಷಿಣದೇಶವನ್ನು ಏಕಚ್ಛತ್ರಾಧಿಪತ್ಯದಿಂದ ಆಳುತ್ತಿದ್ದರು. ಇವರಿಗೆ ಕಾಂಚೀನಗರವು ಮುಖ್ಯ ರಾಜಧಾನಿಯಾಗಿತ್ತು. ಇವರ ಕಾಲದಲ್ಲಿ ದಕ್ಷಿಣ ದೇಶದಲ್ಲಿ ಅನೇಕ ಶಿವದೇವಾಲಯಗಳು ನಿರ್ಮಿತವಾದವು. ಪರಮ ಶಿವೋಪಾಸಕರಾದ ಈ ರಾಜರ ಸಂತತಿಯಲ್ಲಿ ಅತ್ಯಂತ ಪ್ರಸಿದ್ಧರಾಗಿರುವ ಅತ್ಯಂತಕಾಮು, ರಾಜಸಿಂಹ, ಗುಣಭರ ಎಂಬ ಮೂರು ಜನ ಚಕ್ರವರ್ತಿಗಳು ಧರ್ಮಶಾಸ್ತ್ರಾನುಸಾರವಾಗಿ ಉತ್ತಮಾಂಗದಲ್ಲಿ (ಮಸ್ತಕ ದಲ್ಲಿ) ಶಿವಲಿಂಗವನ್ನು ಧರಿಸಿಕೊಂಡಿದ್ದರೆಂಬ ವಿಷಯವು, ತಮಿಳು ದೇಶದಲ್ಲಿ ದೊರೆಯುವ ಶಿಲಾಶಾಸನಗಳಿಂದ ಸ್ಪಷ್ಟವಾಗುತ್ತದೆ. ಈ ರಾಜರು ಕ್ರಿ.ಶ. ೬ ನೆಯ ಶತಮಾನದಲ್ಲಿ ದಕ್ಷಿಣದೇಶವನ್ನಾಳುತ್ತಿದ್ದರು.

ಮದ್ರಾಸಿಗೆ ೩೨ ಮೈಲು ದೂರದಲ್ಲಿರುವ ಮಾಮಲ್ಲಪುರಂ ಮತ್ತು ಸಾಲುವಂಕುಪ್ಪಂ ಎಂಬ ಗ್ರಾಮಗಳಲ್ಲಿ ಅತ್ಯಂತಕಾಮನ ಶಾಸನ ಗಳೂ, ತ್ರಿಚನಾಪಳ್ಳಿಯಲ್ಲಿ ಗುಣಭರನ ಶಾಸನವೂ, ಕಾಂಚೀ ಮತ್ತು ವಾಯಲೂರು ಗ್ರಾಮಗಳಲ್ಲಿ ರಾಜಸಿಂಹನ ಶಾಸನಗಳೂ ವಿರಾಜಿಸು ತ್ತಿರುವವು. ಈ ಶಾಸನಗಳು ೧೮೮೬ ನೆಯ ಇಸವಿಯಲ್ಲಿ ದೊರೆತಿದ್ದು (South Indian Inscriptions) ಸೌತ್ ಇಂಡಿಯನ್ ಇನ್ ಸ್ಕ್ರಿಪ್‌ಷನ್ಸ್ ವಾಲ್ಯೂಂ ೧ ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿ ಶಾಸನ ಇಲಾಖೆಯ ಮುಖ್ಯಾಧಿಕಾರಿಗಳಾದ (Dr. E. Hultzsch, P.HD.) ಡಾ॥ ಇ. ಹುಲ್ಷ್ ಪಿ.ಎಚ್‌ಡಿ. ಇವರಿಂದ ಪರಿಶೋಧಿಸಲ್ಪಟ್ಟು ೧೮೯೦ ನೆಯ ಇಸವಿಯಲ್ಲಿ ಇಂಗ್ಲಿಷ್ ವ್ಯಾಖ್ಯಾನದೊಡನೆ ಮುದ್ರಿಸಲ್ಪಟ್ಟಿರುವವು.

ಮಾಮುಲ್ಲಪುರದಲ್ಲಿರುವ ಗಣೇಶದೇವಸ್ಥಾನದಲ್ಲಿ ಅತ್ಯಂತಕಾಮನ ಬಗ್ಗೆ ಒಂದು ಶಾಸನವಿರುವದು. ಮೇಲ್ಕಂಡ ಪುಸ್ತಕದಲ್ಲಿ ಇದು ೧೬ನೆಯ ನಂಬರಿನ ಶಾಸನವಾಗಿರುವುದು. ಆ ಶಾಸನದಲ್ಲಿ ಹನ್ನೊಂದು ಶ್ಲೋಕ ಗಳಿರುವವು. ಅವುಗಳಲ್ಲಿ ೩ ಮತ್ತು ೯ನೆಯ ಶ್ಲೋಕಗಳು ಅತ್ಯಂತ ಕಾಮಮಹಾರಾಜನು ಮಸ್ತಕದಲ್ಲಿ ಶಿವಲಿಂಗವನ್ನು ಧರಿಸಿಕೊಂಡಿದ್ದನೆಂಬು ದನ್ನು ಸ್ಫುಟವಾಗಿ ಪ್ರತಿಪಾದಿಸುತ್ತಿರುವವು.

ಶ್ರೀಮತೋऽತ್ಯಂತಕಾಮಸ್ಯ ದ್ವಿಷದ್ದರ್ಪಾಪಹಾರಿಣಃ ।
ಶ್ರೀನಿಧೇಃ ಕಾಮರಾಗಸ್ಯ ಹರಾರಾಧನಸಂಗಿನಃ ॥೩॥

ಅಭಿಷೇಕಜಲಾಪೂರ್ಣೇ ಚಿತ್ರರತ್ನಾಂಬುಜಾಕರೇ ।
ಆಸ್ತೇ ವಿಶಾಲೇ ಸುಮುಖಃ ಶಿರಸ್ಸರಸಿ ಶಂಕರಃ ॥೯॥

ಅತ್ಯಂತಕಾಮರಾಜನು ವೈರಿಗಳ ಅಹಂಕಾರವನ್ನು ನಾಶಮಾಡು ವವನೂ, ಐಶ್ವರ್ಯಕ್ಕೆ ನಿಧಿಸ್ವರೂಪನೂ, ಮನ್ಮಥನಂತೆ ಸುಂದರನೂ, ಶಿವಪೂಜೆಯಲ್ಲಿ ಆಸಕ್ತನೂ ಆಗಿದ್ದನೆಂಬುದು ೩ನೆಯ ಶ್ಲೋಕದ ಅಭಿ ಪ್ರಾಯವಾಗಿರುತ್ತದೆ. ೯ ನೆಯ ಶ್ಲೋಕದಲ್ಲಿ ಈ ರಾಜನ ಮಸ್ತಕವು ಸರೋವರಕ್ಕೆ ಹೋಲಿಸಲ್ಪಟ್ಟು ವರ್ಣಿಸಲ್ಪಟ್ಟಿದೆ. ಸರೋವರವು ಜಲದಿಂದ ಪೂರ್ಣವಾಗಿರುವಂತೆ, ಈ ರಾಜನ ಮಸ್ತಕವು ಲಿಂಗಾಭಿಷೇಕಜಲದಿಂದ ಪೂರ್ಣವಾಗಿರುವದೆಂದೂ, ಸರೋವರವು ಚಿತ್ರವಿಚಿತ್ರವಾದ ಕಮಲಗಳಿಂದ ಕೂಡಿರುವಂತೆ, ಈ ರಾಜನ ಮಸ್ತಕವು ಚಿತ್ರವಿಚಿತ್ರವಾದ ರತ್ನಗಳಿಂದ ಕೂಡಿರುವದೆಂದೂ ಅಂದರೆ ರತ್ನಖಚಿತವಾದ ಕಿರೀಟದಿಂದ ಯುಕ್ತವಾಗಿರು ವದೆಂದೂ, ಸರೋವರವು ವಿಶಾಲವಾಗಿರುವಂತೆ ಈ ರಾಜನ ಮಸ್ತಕವು ವಿಶಾಲವಾಗಿರುವದೆಂದೂ, ಇಂತಹ ಶಿರಸ್ಸೆಂಬ ಸರೋವರದಲ್ಲಿ ಉತ್ತಮ ಮುಖವುಳ್ಳ, ಶಂಖರೂಪನಾದ ಶಿವನು ವಾಸವಾಗಿದ್ದಾನೆಂದೂ ಶ್ಲೇಷದಿಂದ ಬಹುಮನೋಹರವಾಗಿ ವರ್ಣಿತವಾಗಿದೆ. 'ಶಂಕರ' ಎಂದರೆ ಶಿವ ಮತ್ತು ಶಂಖ ಎಂದು ಎರಡು ಅರ್ಥವಾಗುವದು. ಸರೋವರದಲ್ಲಿ ಶಂಖವಿರುವಂತೆ

ಈ ರಾಜನ ಮಸ್ತಕದಲ್ಲಿ ಶಿವನು ಇರುವನು. ಅಂದರೆ " ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ " ಎಂಬ ಧರ್ಮಶಾಸ್ತ್ರೋಕ್ತಿಯಂತೆ, ಈ ರಾಜನು ತನ್ನ ಮಸ್ತಕದಲ್ಲಿ ಶಿವಲಿಂಗವನ್ನು ಧರಿಸಿಕೊಂಡಿದ್ದನೆಂದು ತಾತ್ಪರ್ಯವು. ೯ನೆಯ ಶ್ಲೋಕಕ್ಕೆ ಡಾ|| ಹುಲ್ಷ್‌ರವರು ಈ ಕೆಳಗೆ ಕಂಡಂತೆ ಇಂಗ್ಲೀಷಿನಲ್ಲಿ ಟಿಪ್ಪಣಿಯನ್ನು ಬರೆದಿರುತ್ತಾರೆ.

" Siva abides on the head of Atyantakama " means the same as " he bears Siva on his head " (verse 3) viz., " he is a devotee of Siva "

" ಶಿವನು ಅತ್ಯಂತಕಾಮನ ಮಸ್ತಕದ ಮೇಲೆ ನೆಲಸಿದ್ದಾನೆ; ಎಂಬುದು ಅವನು ಶಿವನನ್ನು ತನ್ನ ಮಸ್ತಕದಲ್ಲಿ ಧರಿಸಿಕೊಂಡಿದ್ದಾನೆಂಬ ಅರ್ಥವೇ ಆಗಿದೆ. (ಶ್ಲೋಕ ೩) ಅಂದರೆ ಅವನು ಮಹಾಶಿವಭಕ್ತ. " ಇದು ಮೇಲಿನ ಇಂಗ್ಲಿಷ್ ವಾಕ್ಯಗಳ ಅಭಿಪ್ರಾಯು.

ಯಸ್ಯಾಂಗುಷ್ಠಭರಾಕ್ರಾಂತಃ ಕೈಲಾಸಃ ಸದಶಾನನಃ ।
ಪಾತಾಲಮಗಮನ್ಮೂರ್ಧ್ನಾ ಶ್ರೀನಿಧಿಸ್ತಂ ಬಿಭರ್ತ್ಯಜಂ ॥೩॥

ಈ ಶಾಸನದಲ್ಲಿ ಇದು ೩ನೆಯ ಶ್ಲೋಕವು.

ರಾವಣನಿಂದ ಯುಕ್ತವಾದ ಕೈಲಾಸಪರ್ವತವು ಯಾವನ ಅಂಗುಷ್ಠದಿಂದ ತುಳಿಯಲ್ಪಟ್ಟದಾಗಿ ಪಾತಾಲಲೋಕವನ್ನು ಸೇರಿತೋ, ಅಂತಹ ಉತ್ಪತ್ತಿರಹಿತನಾದ ಶಿವನನ್ನು ಶ್ರೀನಿಧಿಯು ಅಂದರೆ ಅತ್ಯಂತಕಾಮನು ಮಸ್ತಕದಲ್ಲಿ ಧರಿಸಿರುತ್ತಾನೆ ; ಎಂಬುದು ಈ ಶ್ಲೋಕದ ಅಭಿಪ್ರಾಯವು. ಈ ಶೋಕವೂ ಮತ್ತು ೯ನೆಯ ಶ್ಲೋಕವೂ, ಅತ್ಯಂತಕಾಮಮಹಾರಾಜನು ಮಸ್ತಕದಲ್ಲಿ ಲಿಂಗವನ್ನು ಧರಿಸಿಕೊಂಡಿದ್ದನೆಂಬುದನ್ನು ಬಹು ಸ್ಫುಟವಾಗಿ ಪ್ರತಿಪಾದಿಸುತ್ತಿರುವವು.

ಧಿಕ್ ತೇಷಾಂ ಧಿಕ್ ತೇಷಾಂ ಪುನರಪಿ ಧಿಗ್ಧಿಗ್ಧಿಗಸ್ತು ಧಿಕ್ತೇಷಾಂ ।
ಯೇಷಾಂ ನ ವಸತಿ ಹೃದಯೇ ಕುಪಥಗತಿವಿಮೋಕ್ಷಕೋ ರುದ್ರಃ ॥೧೧॥

ಈ ಶಾಸನದಲ್ಲಿ ಇದು ಹನ್ನೊಂದನೆಯ ಶ್ಲೋಕವು.

ಯಮಲೋಕಗಮನವನ್ನು ತಪ್ಪಿಸತಕ್ಕ ಶಿವನು ಯಾರ ಹೃದಯದಲ್ಲಿ ವಾಸವಾಗಿರುವದಿಲ್ಲವೋ, ಅವರಿಗೆ ಧಿಕ್ಕಾರವಿರಲಿ, ಧಿಕ್ಕಾರವಿರಲಿ, ಧಿಕ್ಕಾರವಿರಲಿ, ಧಿಕ್ಕಾರವಿರಲಿ, ಧಿಕ್ಕಾರವಿರಲಿ, ಧಿಕ್ಕಾರವಿರಲಿ. ಎಂಬುದು ಈ ಶ್ಲೋಕದ ಅಭಿಪ್ರಾಯವು. ಶಿವನನ್ನು ಧ್ಯಾನಿಸದೆ ಇರುವವನ ಜನ್ಮಕ್ಕೆ ಧಿಕ್ಕಾರವಿರಲಿ, ಧಿಕ್ಕಾರವಿರಲಿ, ಎಂದು ೬ ಸಾರೆ ಪ್ರಯೋಗಿಸಿರುವದನ್ನು ನೋಡಿದರೆ, ಈ ಮಹಾರಾಜನು ಶೈವಶಿಖಾಮಣಿಯಾದ ವೀರಶೈವನೆಂಬುದರಲ್ಲಿ ಯಾವ ಸಂದೇಹವೂ ಇರುವದಿಲ್ಲ. ಇಂತಹ ವೀರಶಿವಭಕ್ತಿಯು ವೀರಶೈವರಲ್ಲಲ್ಲದೆ ಅನ್ಯರಲ್ಲಿ ಎಂದಿಗೂ ಇರುವದಿಲ್ಲವೆಂಬುದು ಶಾಸ್ತ್ರಪ್ರಸಿದ್ಧವೂ ಲೋಕಪ್ರಸಿದ್ಧವೂ ಆದ ವಿಷಯವಾಗಿದೆ.

ಮಾಮಲ್ಲಪುರಶಾಸನದಲ್ಲಿರುವ "ಶ್ರೀಮತೋಽತ್ಯಂತಕಾಮಸ್ಯ" ಮತ್ತು "ಅಭಿಷೇಕಜಲಾಪೂರ್ಣೇ" ಎಂಬೀ ಎರಡು ಶ್ಲೋಕಗಳು ಸಾಲವಂಕುಪ್ಪಂ ಗ್ರಾಮದ ಅತಿರಣಚಂಡೇಶ್ವರದೇವಾಲಯದಲ್ಲಿರುವ ೫೧ನೆಯ ನಂಬರಿನ ಶಾಸನದಲ್ಲಿಯೂ ಸಹ ಕೆತ್ತಲ್ಪಟ್ಟಿರುವವು. ಈ ಅತ್ಯಂತಕಾಮಮಹಾರಾಜನು ಮಾಮಲ್ಲಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ವಾಸವಾಗಿದ್ದನು.

ಮದ್ರಾಸ ಇಲಾಖೆಯಲ್ಲಿ ಸುಪ್ರಸಿದ್ಧ ಪಟ್ಟಣವೆನಿಸಿರುವ ತ್ರಿಚನಾಪಳ್ಳಿಯ ಸಮೀಪದಲ್ಲಿ ಕಾವೇರಿನದಿಯ ದಂಡೆಯ ಮೇಲೆ ಒಂದು ಬೆಟ್ಟವಿದ್ದು, ಆ ಬೆಟ್ಟದ ಮೇಲೆ ಗುಣಭರಮಹಾರಾಜನು ಒಂದು ಶಿವಲಿಂಗಮೂರ್ತಿಯನ್ನು ಸ್ಥಾಪಿಸಿರುವ ವಿಷಯವು ಆ ಬೆಟ್ಟದಲ್ಲಿರುವ ಗವಿಯ ಎರಡು ಕಂಬಗಳಮೇಲೆ ಕೆತ್ತಲ್ಪಟ್ಟಿರುವ ಶಾಸನಗಳಿಂದ

ತಿಳಿದುಬರುತ್ತದೆ. ಪ್ರತಿಯೊಂದು ಕಂಬದಲ್ಲಿಯೂ ನಾಲ್ಕು ನಾಲ್ಕು ಶ್ಲೋಕಗಳು ಕೆತ್ತಲ್ಪಟ್ಟಿರುವವು. ಡಾ॥ ಹುಲ್ಷ್‌ರವರು ಮುದ್ರಿಸಿ ಪ್ರಕಟಿಸಿರುವ ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ ವಾಲ್ಯೂಂ ೧ ರಲ್ಲಿ ಇವು ೩೩ ಮತ್ತು ೩೪ ನೆಯ ನಂಬರಿನ ಶಾಸನಗಳಾಗಿರುವವು. ಈ ಎರಡೂ ಶಾಸನಗಳಲ್ಲಿ ಗುಣಭರರಾಜನು ಲಿಂಗಧಾರಿಯಾಗಿದ್ದನೆಂಬ ವಿಷಯವು ಬಹುಸ್ಫುಟವಾಗಿ ಪ್ರತಿಪಾದಿಸಲ್ಪಟ್ಟಿದ್ದು, ೩೩ ನೆಯ ನಂಬರಿನ ಶಾಸನದಲ್ಲಿರುವ ಶ್ಲೋಕವು ಈ ಕೆಳಗೆ ಉದಾಹರಿಸಲ್ಪಟ್ಟಿರುವದು.

ಗುಣಭರನಾಮನಿ ರಾಜನ್ಯನೇನ ಲಿಂಗೇನ ಲಿಂಗಿನಿ ಜ್ಞಾನಂ।
ಪ್ರಥತಾಂ ಚಿರಾಯ ಲೋಕೇ ವಿಪಕ್ಷವೃತ್ತೇಃ ಪರಾವೃತ್ತಂ॥

ಈ ಶ್ಲೋಕದಲ್ಲಿ "ಪರ್ವತೋ ವಹ್ನಿಮಾನ್ ಧೂಮಾತ್" ಎಂಬ ತರ್ಕಶಾಸ್ತ್ರಪ್ರಕ್ರಿಯಾನುಸಾರವಾಗಿ, ಧೂಮರೂಪವಾದ ಲಿಂಗದಿಂದ ವಹ್ನಿರೂಪವಾದ ಲಿಂಗಿಯಲ್ಲಿ ಉಂಟಾಗುವ ಜ್ಞಾನವು ವಿಪಕ್ಷವೃತ್ತಿಯಿಂದ ಅಂದರೆ ಪರ್ವತೇತರಸ್ಥಾನವೃತ್ತಿಯಿಂದ ಪರಾವೃತ್ತವಾಗುವಂತೆ, ಲಿಂಗಧಾರಿಯಾಗಿರುವ ಗುಣಭರರಾಜನಲ್ಲಿ ಲಿಂಗಸಂಬಂಧದಿಂದ ಉಂಟಾಗಿರುವ ಶಿವಜ್ಞಾನವು ಶಿವೇತರದೇವತಾಸಂಬಂಧದಿಂದ ದೂರವಾಗಿ ಲೋಕದಲ್ಲಿ ಬಹುಕಾಲ ಪ್ರಸಿದ್ಧವಾಗಲಿ. ಎಂಬುದು ಈ ಶ್ಲೋಕದ ಅಭಿಪ್ರಾಯವಾಗಿರುವದು. ಈ ಶ್ಲೋಕದಲ್ಲಿ ಗುಣಭರರಾಜನಲ್ಲಿದ್ದ ಶಿವಜ್ಞಾನವು ಶ್ಲೇಷದಿಂದ ಬಹುಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವದು.

೩೪ ನೆಯ ನಂಬರಿನ ಶಾಸನದಲ್ಲಿ ಈ ಕೆಳಗೆ ಉದಾಹರಿಸಿರುವ ಶ್ಲೋಕವು ಕೆತ್ತಲ್ಪಟ್ಟಿರುವುದು.

ನಿರ್ಮಾಪಿತಾಮತಿಮುದಾ ಪುರುಷೋತ್ತಮೇನ
ಶೈಲೀಂ ಹರಸ್ಯ ತನುಮಪ್ರತಿಮಾಮನೇನ।
ಕೃತ್ವಾ ಶಿವಂ ಶಿರಸಿ ಧಾರಯತಾತ್ಮಸಂಸ್ಥ
ಮುಚ್ಚೈಃಶಿರಸ್ತ್ವಮಚಲಸ್ಯ ಕೃತಂ ಕೃತಾರ್ಥಂ॥

ಶಿವಲಿಂಗವನ್ನು ಶಿರಸ್ಸಿನಲ್ಲಿ ಧರಿಸಿಕೊಂಡಿರುವ ಪುರುಷಶ್ರೇಷ್ಠನಾದ ಗುಣಭರರಾಜನು ಪ್ರತಿಮಾಕಾರವಲ್ಲದ ಶಿಲಾಮಯಶಿವಲಿಂಗಮೂರ್ತಿ ಯನ್ನು ಪರ್ವತಾಗ್ರದಲ್ಲಿ ಸಂತೋಷದಿಂದ ಸ್ಥಾಪಿಸಿ, ಆ ಪರ್ವತದ ಉನ್ನತಶಿಖರವನ್ನು ಕೃತಾರ್ಥವನ್ನಾಗಿ ಮಾಡಿದನು. ಎಂಬುದು ಈ ಶ್ಲೋಕದ ಅಭಿಪ್ರಾಯವಾಗಿರುವದು. ಈ ಶ್ಲೋಕದಲ್ಲಿ ಗುಣಭರರಾಜನಿಗೆ "ಶಿವಂ ಶಿರಸಿ ಧಾರಯತಾ" ಎಂದು ಉಲ್ಲೇಖಿಸಿರುವುದರಿಂದಲೂ, ಮೇಲಿನ ಶ್ಲೋಕದಲ್ಲಿ ಈ ರಾಜನಿಗೆ "ಲಿಂಗಿನಿ" ಎಂಬ ವಿಶೇಷಣವು ಕೊಡಲ್ಪಟ್ಟಿರುವದರಿಂದಲೂ, ಈ ರಾಜನು ಲಿಂಗಧಾರಿಯಾದ ಶಿವಭಕ್ತ ನಾಗಿದ್ದನೆಂದು ಸ್ಪಷ್ಟವಾಗುತ್ತದೆ. "ಲಿಂಗಿನ್" ಎಂಬ ಶಬ್ದವು ಲಿಂಗ ಧಾರಿಗಳಾದ ವೀರಶೈವರಲ್ಲಿ ಅನ್ವಯಿಸುವದಲ್ಲದೆ, ಇನ್ನಾರಲ್ಲಿಯೂ ಅನ್ವ ಯಿಸುವದಿಲ್ಲವೆಂಬುದು ಲೋಕಪ್ರಸಿದ್ಧವಾದ ವಿಷಯವಾಗಿದೆ. ಶಿವಾಗಮ ಗಳಲ್ಲಿಯೂ, ಮಹಾಭಾರತಾದಿಗಳಲ್ಲಿಯೂ, ವ್ಯಾಸೋಕ್ತಪುರಾಣಗಳ ಲ್ಲಿಯೂ, ವೀರಶೈವಧರ್ಮಗ್ರಂಥಗಳಲ್ಲಿಯೂ, "ಲಿಂಗಿನ್" ಶಬ್ದವು ಲಿಂಗಧಾರಿಗಳಾದ ವೀರಶೈವರ ವಿಷಯದಲ್ಲಿಯೇ ಪ್ರಯೋಗಿಸಲ್ಪಟ್ಟಿರು ವದು. ಇದರಿಂದ ಗುಣಭರ ಮಹಾರಾಜನು ಲಿಂಗಧಾರಿಯಾಗಿದ್ದನೆಂಬು ದರಲ್ಲಿ ಯಾವ ಸಂಶಯವೂ ಇರುವದಿಲ್ಲ. ಈ ಎರಡು ಶಾಸನಗಳೂ ಈ ರಾಜನು ವೀರಶೈವಮತಾನುಯಾಯಿಯಾಗಿದ್ದನೆಂಬುದನ್ನು ಸ್ಪಷ್ಟ ವಾಗಿ ಪ್ರತಿಪಾದಿಸುತ್ತಿರುವವು.

ಇನ್ನು ಇದೇ ಪಲ್ಲವ ವಂಶದಲ್ಲಿ ಅತ್ಯಂತ ಪ್ರಸಿದ್ಧನಾಗಿರುವ ರಾಜಸಿಂಹಮಹಾರಾಜನೂ ಸಹ ಲಿಂಗಧಾರಿಯಾಗಿದ್ದನೆಂಬ ವಿಷಯವು ಕಾಂಚೀ ಕ್ಷೇತ್ರದಲ್ಲಿರುವ ರಾಜಸಿಂಹೇಶ್ವರ ದೇವಸ್ಥಾನದ ಗೋಡೆಯ ಮೇಲೆ ಕೆತ್ತಲ್ಪಟ್ಟಿರುವ ಶಾಸನದಿಂದ ತಿಳಿದುಬರುತ್ತದೆ. ಇದು ಮೇಲ್ಕಂಡ ಶಾಸನ ಪುಸ್ತಕದಲ್ಲಿ ೨೪ ನೆಯ ನಂಬರಿನ ಶಾಸನವಾಗಿರುವದು. ಈ ಶಾಸನದಲ್ಲಿ ೧೨ ಶ್ಲೋಕಗಳಿದ್ದು, ಕೊನೆಯ ಶ್ಲೋಕವು ಈ ಮುಂದೆ ಉದಾಹರಿಸಲ್ಪಟ್ಟಿರುವದು.

ರಾಜಸಿಂಹೋ ರಣಜಯಃ ಶ್ರೀಭರಶ್ಚಿತ್ರಕಾರ್ಮುಕಃ ।
ಏಕವೀರಶ್ಚಿರಂ ಪಾತು ಶಿವಚೂಡಾಮಣಿರ್ಮಹೀಂ ॥೧೨॥

ಯುದ್ಧದಲ್ಲಿ ಜಯಶಾಲಿಯಾಗಿರುವವನೂ, ರಾಜ್ಯಲಕ್ಷ್ಮಿಯಿಂದ ಕೂಡಿರುವವನೂ, ವಿಚಿತ್ರವಾದ ಧನುಸ್ಸುಳ್ಳವನೂ, ಲೋಕೈಕವೀರನೂ, ಶಿವನೇ ಚೂಡಾಮಣಿಯಾಗಿ ಉಳ್ಳವನೂ ಅಂದರೆ ಶಿವನನ್ನು ಮಸ್ತಕದಲ್ಲಿ ಧರಿಸಿರುವವನೂ ಆದ ರಾಜಸಿಂಹನು ಭೂಮಿಯನ್ನು ಬಹುಕಾಲ ಆಳಲಿ, ಎಂಬುದು ಈ ಶ್ಲೋಕದ ಅಭಿಪ್ರಾಯವಾಗಿರುವದು. ಈ ಶ್ಲೋಕದಲ್ಲಿ ರಾಜಸಿಂಹಮಹಾರಾಜನಿಗೆ " ಶಿವಚೂಡಾಮಣಿ " ಎಂಬ ವಿಶೇಷಣವು ಕೊಡಲ್ಪಟ್ಟಿರುವದರಿಂದ, ಇವನು ಮಸ್ತಕದಲ್ಲಿ ಶಿವಲಿಂಗವನ್ನು ಧರಿಸಿ ಕೊಂಡಿದ್ದನೆಂದು ಸ್ಪಷ್ಟವಾಗುವದು.

ಮೇಲ್ಕಂಡ ರಾಜಸಿಂಹೇಶ್ವರ ದೇವಸ್ಥಾನದ ಪ್ರಾಕಾರದ ಗೋಡೆಯ ಮೇಲೆ, ಈ ರಾಜಸಿಂಹರಾಜನಿಗೆ ಶ್ರೀಪೂರ್ವಕವಾಗಿ ೨೫೪ ವಿಶೇಷಣ ಗಳು ಕೆತ್ತಲ್ಪಟ್ಟಿರುವವು. ಅವುಗಳಲ್ಲಿ " ಶ್ರೀಋಷಭಲಾಂಛನಃ " " ಶ್ರೀ ಆಗಮಪ್ರಮಾಣಃ " ಮತ್ತು " ಶ್ರೀ ಆಗಮಾನುಸಾರೀ " ಎಂಬ ಮೂರು ವಿಶೇಷಣಗಳು ವಿರಾಜಿಸುತ್ತಿರುವವು. ಈ ಮೂರು ವಿಶೇ ಷಣಗಳನ್ನೂ ವಿಮರ್ಶಿಸಿನೋಡಿದರೆ, ವೀರಶೈವಸಿದ್ಧಾಂತದಂತೆ ಈ ಮಹಾ ರಾಜನು ಆಗಮಗಳನ್ನು ಪ್ರಮಾಣವನ್ನಾಗಿಟ್ಟುಕೊಂಡಿದ್ದನೆಂದೂ, ಆಗಮ ಗಳಿಗೆ ಅನುಸಾರವಾಗಿ ವರ್ತಿಸುತ್ತಿದ್ದನೆಂದೂ, ವೀರಶೈವಧರ್ಮಶಾಸ್ತ್ರಾನು ಸಾರವಾಗಿ ನಂದಿಯನ್ನೇ ರಾಜಚಿಹ್ನವನ್ನಾಗಿಮಾಡಿಕೊಂಡಿದ್ದನೆಂದೂ ಸ್ಪಷ್ಟವಾಗಿ ತಿಳಿದುಬರುತ್ತದೆ. ಇದರಿಂದ ಈ ಮಹಾರಾಜನು ಲಿಂಗಧಾರಿ ಯಾದ ಮಹಾಶಿವಭಕ್ತನಾಗಿದ್ದನೆಂಬುದರಲ್ಲಿ ಯಾವ ಸಂಶಯವೂ ಇರುವದಿಲ್ಲ.

ಈ ರಾಜಸಿಂಹಮಹಾರಾಜನ ಬಗ್ಗೆ ಮದ್ರಾಸಿಗೆ ೪೫ ಮೈಲು ದೂರದಲ್ಲಿರುವ ಚಂಗಲಪೇಟೆ ಡಿಸ್ಟ್ರಿಕ್ಟ್ ವಾಯಲೂರು ಗ್ರಾಮದಲ್ಲಿ

ಮತ್ತೊಂದು ಶಾಸನವು ದೊರೆತಿರುವದು. ಈ ಶಾಸನವು ೧೯೦೮ ನೆಯ ಇಸವಿಯಲ್ಲಿ ಮದರಾಸ್ ಗೌರ್ನಮೆಂಟಿನವರಿಂದ ಶೋಧಿಸಲ್ಪಟ್ಟು ಪ್ರಕಟ ಸಲ್ಪಟ್ಟಿರುವದು. ಈ ಶಾಸನವು ವಾಯಲೂರು ಗ್ರಾಮದಲ್ಲಿರುವ ವ್ಯಾಘ್ರ ಪುರೀಶ್ವರ ದೇವಸ್ಥಾನದ ಎರಡು ಕಂಬಗಳಮೇಲೆ ಕೆತ್ತಲ್ಪಟ್ಟಿರುವದು. ಈ ಶಾಸನದ ಪ್ರಾರಂಭದಲ್ಲಿ ರಾಜಸಿಂಹ ಮಹಾರಾಜನ ವಂಶಾವಳಿಯು ವರ್ಣಿಸಲ್ಪಟ್ಟಿದ್ದು, ಆದರಲ್ಲಿ ೫೪ ಜನರ ಹೆಸರುಗಳು ಉಲ್ಲೇಖಿಸಲ್ಪಟ್ಟಿರು ವವು. ಬಳಿಕ ರಾಜಸಿಂಹನ ವರ್ಣನಾತ್ಮಕವಾಗಿ ಈ ಕೆಳಗೆ ಉದಾಹರಿಸ ಲ್ಪಟ್ಟಿರುವ ಎರಡು ಶ್ಲೋಕಗಳು ಕೆತ್ತಲ್ಪಟ್ಟಿರುವವು.

ಶ್ರೀಪಲ್ಲವಾನ್ವಯಕುಲಾಚಲರಾಜಸಿಂಹೋ
ಯಃ ಕ್ಷತ್ರಸಿಂಹ ಇತಿ ವಿಶ್ರುತಪುಣ್ಯಕೀರ್ತಿಃ ।
ಜೀಯಾನ್ಮಹೇಶ್ವರಶಿಖಾಮಣಿದೀಪ್ತಮೌಲಿ
ರ್ಯುದ್ಧಾರ್ಜುನೋ ಸ ಖಲು ಲೋಕನರೇಂದ್ರಸಿಂಹಃ ॥
ಶಂಭೋಃ ಪಾದಾರವಿಂದದ್ವಯಪರಿಚರಣೇ
ನಿತ್ಯಮುತ್ಯಂತಕಾಮಃ । ಶ್ರೀಮೇಘೋ ವಿಪ್ರಸಸ್ಯಾಕರ
ವಿಭವಕರೇ ವ್ಯೋಮುರತ್ನೋಘಚಂದ್ರಃ । ರಾಜ್ಯಾಂತಾ
ರಾವಗಾಹವಿದಿತಮಹಾಮಲ್ಲಶಬ್ದಃ ಪ್ರಜಾನಾಂ । ರಕ್ಷಾದೀಕ್ಷಾ
ಧಿಕಾರಂ ವಹತು ರಣಜಯಃ ಶ್ರೀನಿಧಿರ್ದ್ವೀಪಲಕ್ಷ್ಮಂ ॥

ಈ ಎರಡು ಶ್ಲೋಕಗಳಲ್ಲಿ ರಾಜಸಿಂಹನ ಶೌರ್ಯಧೈರ್ಯಾದಿ ಗುಣಗಳು ವರ್ಣಿಸಲ್ಪಟ್ಟಿರುವವು. ಮೇಲಿನ ಶ್ಲೋಕದಲ್ಲಿ ಈ ಮಹಾ ರಾಜನಿಗೆ "ಮಹೇಶ್ವರಶಿಖಾಮಣಿದೀಪ್ತಮೌಲಿಃ" ಎಂಬ ವಿಶೇ ಷಣವು ಕೊಡಲ್ಪಟ್ಟಿರುವದರಿಂದ, ಈ ಮಹಾರಾಜನು ತನ್ನ ಮಸ್ತಕದಲ್ಲಿ ಯಾವಾಗಲೂ ಶಿವಲಿಂಗವನ್ನು ಧರಿಸಿಕೊಂಡಿರುತ್ತಿದ್ದನೆಂಬುದು ಸ್ಪಷ್ಟ ವಾಗುವದು. ಕಾಂಚಿಯಲ್ಲಿರುವ ಶಾಸನದಲ್ಲಿ ಈ ಮಹಾರಾಜನಿಗೆ "ಶಿವ ಚೂಡಾಮಣಿ" ಎಂಬ ವಿಶೇಷಣವು ಕೊಡಲ್ಪಟ್ಟಿರುವದರಿಂದಲೂ, ವಾಯುಲೂರುಶಾಸನದಲ್ಲಿ "ಮಹೇಶ್ವರಶಿಖಾಮಣಿದೀಪ್ತಮೌಲಿಃ"

ಎಂಬ ವಿಶೇಷಣವು ಕೊಡಲ್ಪಟ್ಟಿರುವದರಿಂದಲೂ, ಅತ್ಯಂತಕಾಮ ಮತ್ತು ಗುಣಭರ ಮಹಾರಾಜರಂತೆ ರಾಜಸಿಂಹನೂ ಸಹ ಮಸ್ತಕದಲ್ಲಿ ಶಿವಲಿಂಗವನ್ನು ಧರಿಸಿಕೊಂಡಿದ್ದನೆಂದು ಸ್ಪಷ್ಟವಾಗಿ ತೋರಿಬರುತ್ತದೆ.

ಇಂಡಿಯಾ ದೇಶದ ಶಾಸನ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಕೈ॥ ರಾ॥ ಬ॥ ಎಚ್. ಕೃಷ್ಣಶಾಸ್ತ್ರಿಗಳವರು ವಾಯಲೂರಿನಲ್ಲಿ ದೊರೆತಿರುವ ರಾಜಸಿಂಹ ಮಹಾರಾಜನ ಶಾಸನವನ್ನು "ಎಫಿಗ್ರಾಫಿಯಾ ಇಂಡಿಕಾ" ವಾಲ್ಯುಂ ೧೮ ರಲ್ಲಿ ಪೂರ್ಣವಾಗಿ ವಿಮರ್ಶಿಸಿ, ಪಲ್ಲವವಂಶದ ಅತ್ಯಂತಕಾಮ, ರಾಜಸಿಂಹ, ಗುಣಭರ ಎಂಬ ಹೆಸರಿನ ಮಹಾರಾಜರು ತಮ್ಮ ಮಸ್ತಕದಲ್ಲಿ ಶಿವಲಿಂಗವನ್ನು ಧರಿಸಿಕೊಂಡಿದ್ದರೆಂದೂ, ವೀರಶೈವ ಮತದಲ್ಲಿ ಕಂಡುಬರುವ ಲಿಂಗಧಾರಣವು ಬಹು ಪುರಾತನವಾದುದೆಂದೂ ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾರೆ. ಡಾ॥ ಇ. ಹುಲ್ಷ್‌ರವರು ಈ ರಾಜರ ಕಾಲವನ್ನು ಈ ಕೆಳಗೆ ಉದಾಹರಿಸಿರುವಂತೆ ನಿರ್ಣಯಿಸಿದ್ದಾರೆ.

The date of the Foundation of the Rajasimheswara and Mahendravarmeswara Temple would fall some time before 567 A.D., the date of the end of the first Kirtivarma's reign, say about 550 A.D., This would also be the time of Atyantakama's inscriptions at Mamallapuram.

"ರಾಜಸಿಂಹೇಶ್ವರ ಮತ್ತು ಮಹೇಂದ್ರವರ್ಮೇಶ್ವರ ದೇವಸ್ಥಾನಗಳ ಸ್ಥಾಪನಕಾಲವು ಕ್ರಿ. ಶ. ೫೬೭ಕ್ಕೆ ಹಿಂದೆ ಅಂದರೆ ಮೊದಲನೆಯ ಕೀರ್ತಿವರ್ಮಮಹಾರಾಜನ ಆಳ್ವಿಕೆಯ ಕೊನೆ. ಅಂದರೆ ಸುಮಾರು ಕ್ರಿ. ಶ. ೫೫೦ ಆಗುವುದು. ಮಾಮಲ್ಲಪುರದ ಅತ್ಯಂತಕಾಮಮಹಾರಾಜನ ಶಾಸನದ ಕಾಲವೂ ಇದೇ ಆಗಿರುವದು." ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಈಗ್ಗೆ ೧೪೦೦ ವರ್ಷಗಳ ಪೂರ್ವದಲ್ಲಿದ್ದ ಚಕ್ರವರ್ತಿಗಳು ಲಿಂಗ ಧಾರಿಗಳಾಗಿದ್ದರೆಂದಮೇಲೆ, ಆ ಕಾಲದಲ್ಲಿ ವೀರಶೈವಮತದ ವೈಭವವು ಎಷ್ಟು ಮಟ್ಟಿಗಿರಬಹುದೆಂಬುದನ್ನು ವಾಚಕರೇ ಊಹಿಸಬಹುದಾಗಿದೆ. ಅಸ್ತು !

ಈ ರೀತಿ ಲಿಂಗಧಾರಣದ ಪ್ರಾಚೀನತ್ವವನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತಿರುವ ಶಿಲಾಶಾಸನಗಳು ಈ ವರೆಗೆ ಎಲ್ಲಿಯೂ ದೊರೆತಿದ್ದಿಲ್ಲ. ಈಗ ದೊರೆತಿರುವುದು ವೀರಶೈವರ ಸುದೈವವೆಂದೇ ಹೇಳಬೇಕಾಗಿದೆ. ಲಿಂಗಧಾರಣವು ಇತ್ತೀಚಿನದೆಂದು ಬಡಬಡಿಸುತ್ತಿರುವ ಮಹಾಶಯರು ಈ ಶಾಸನಗಳನ್ನು ಕೂಲಂಕಷವಾಗಿ ವಿಮರ್ಶಿಸಿ, ತಮ್ಮ ಬಡಬಡಿಕೆಯಿಂದ ದೂರರಾಗಿ, ವೀರಶೈವಮತಕ್ಕೆ ಹೆಗ್ಗುರುತಾಗಿರುವ ಲಿಂಗಧಾರಣವು ಅನಾದಿಸಂಸಿದ್ಧವಾದುದೆಂದೂ, ಇಂತಹ ಲಿಂಗಧಾರಣಪದ್ಧತಿಯನ್ನು ಪ್ರಪಂಚದಲ್ಲಿ ನೆಲೆಗೊಳಿಸಿ ಜಗತ್ತನ್ನುದ್ಧರಿಸಿರುವ ಶ್ರೀಜಗದ್ಗುರು ಪಂಚಾಚಾರ್ಯರು ಬಹು ಪುರಾತನಕಾಲದವರೆಂದೂ ನಂಬಿ, ಆ ಮಹಾತ್ಮರ ಕೃಪೆಗೆ ಪಾತ್ರರಾಗಬೇಕೆಂದಾಶಿಸುತ್ತೇನೆ.



# ಪ್ರಾಚೀನಶಾಸನಗಳಲ್ಲಿ ಜಂಗಮಪ್ರಾಶಸ್ತ್ಯ

ವೀರಶೈವ ಧರ್ಮಶಾಸ್ತ್ರದಲ್ಲಿ ಮೋಕ್ಷಪ್ರಾಪ್ತಿಗೆ ಅಷ್ಟಾವರಣಗಳು ಮುಖ್ಯ ಸಾಧನಗಳಾಗಿರುವವು. ಇವುಗಳಲ್ಲಿ **ಗುರು-ಲಿಂಗ-ಜಂಗಮ** ಎಂಬೀ ಮೂರು ವಸ್ತುಗಳು ಅತ್ಯಂತ ಮುಖ್ಯವಾಗಿರುತ್ತವೆ. ಈ ಗ್ರಂಥ ದಲ್ಲಿ ಈ ವರೆಗೆ ವೀರಶೈವಮತಕ್ಕೆ ಮುಖ್ಯಗುರುಗಳಾಗಿರುವ ಶ್ರೀಜಗ ದ್ಗುರು ಪಂಚಾಚಾರ್ಯರ ಮತ್ತು ಆ ಮಹಾತ್ಮರಿಂದ ಸ್ಥಾಪಿತವಾದ ಲಿಂಗಧಾರಣದ ಪ್ರಾಚೀನತ್ವವು ಅನೇಕ ಪ್ರಾಚೀನ ಗ್ರಂಥಗಳ ಮತ್ತು ಶಾಸನಗಳ ಪ್ರಮಾಣಗಳಿಂದ ವಿಶದೀಕರಿಸಲ್ಪಟ್ಟಿರುವದಷ್ಟೆ! ಈಗ ಜಂಗಮ ಪ್ರಾಶಸ್ತ್ಯವು ಪ್ರಾಚೀನಶಾಸನಗಳಿಂದ ಪ್ರತಿಪಾದಿಸಲ್ಪಡುವದು. ಕೆಲ ಜನ ಸರ್ವಜ್ಞಮೂರ್ತಿಗಳು ಬಸವನಿಗಿಂತಲೂ ಪೂರ್ವದ ಶಾಸನಗಳಲ್ಲಿ ಎಲ್ಲಿಯೂ "ಜಂಗಮ" ಶಬ್ದವು ಕಂಡುಬರುವದಿಲ್ಲವೆಂದು ನುಡಿಯು ತ್ತಿರುವರು. ಈ ರೀತಿ ನುಡಿಯುತ್ತಿರುವ ಮಹಾಶಯರು ಈ ಮುಂದೆ ಉದಾಹರಿಸಿರುವ ಶಿಲಾಶಾಸನಗಳನ್ನು ನಿರ್ಮಲಹೃದಯದಿಂದ ನೋಡಿ ಧನ್ಯರಾಗಬೇಕು.

ಮೈಸೂರು ಸಂಸ್ಥಾನಕ್ಕೆ ಸೇರಿರುವ ಶಿವಮೊಗ್ಗಾ ಡಿ॥ ಶಿಕಾರಿಪುರ ತಾ॥ ಬೆಳಗಾವಿ ಗ್ರಾಮದಲ್ಲಿ ಅನೇಕ ಪ್ರಾಚೀನ ಶಾಸನಗಳು ವಿರಾಜಿಸು ತ್ತಿರುವ ವಿಷಯವು ಶಾಸನಶೋಧಕರಿಗೆಲ್ಲ ತಿಳಿದೇ ಇದೆ. ಆ ಶಾಸನಗಳಲ್ಲಿ "ಉದಯಾದಿತ್ಯದೇವ"ನೆಂಬ ರಾಜನ ಶಿಲಾಶಾಸನವೊಂದಿದೆ. ಇದು ಶಿಕಾರಿಪುರ ತಾಲೂಕಿನ ೧೯ನೆಯ ನಂಬರಿನ ಶಾಸನವಾಗಿರುವುದು. ಆ ಶಾಸನದಲ್ಲಿ ಉದಯಾದಿತ್ಯದೇವನ ಧರ್ಮಪತ್ನಿಯಾದ ಲಚ್ಚಲದೇವಿಯ ವರ್ಣನೆಯು ಈ ಮುಂದೆ ಉದಾಹರಿಸಿರುವಂತೆ ಬಹುಮನೋಹರವಾಗಿ ಮಾಡಲ್ಪಟ್ಟಿರುವುದು.

" ಉದಯಾದಿತ್ಯದೇವಂ ಗಂಗವಾಡಿ ಮೊದಲಾಗಿ ಬನವಸೆ ಪನ್ನಿಚ್ಛಾರ್ಸಿರಮುಮಂ ಸಾಂತಳಿಗೆ ಸಾಸಿರಮುಮನಾಳ್ವ ಸುಖಸಂಕಥಾವಿನೋದದಿಂ ರಾಜ್ಯಂಗೈಯುತ್ತಿರೆ ತನ್ಮನೋ ನಯನವಲ್ಲಭೆ ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ ದ್ವಿತೀಯಲಕ್ಷ್ಮೀಸಮಾನೆ ಸಹಜಸೌಭಾಗ್ಯರೂಪನಿಧಾನೆ ಭುವನವಿದ್ಯಾಧರಿ ಸಕಳ ಕಳಾಧರಿ ಚಿಕುರಿತಚಕೋರನಯನೆ ಸಂಗೀತಕಪ್ರಸಂಗ ವಿವೇಕಚೂಡಾಮಣಿ ಸರಣಾಗತರಕ್ಷಾಮಣಿ ಯಾಚಕ ಜನ ಜಂಗಮನಿಧಾನಕಳಸೆ ಸಾರದಾದೇವೀವರಪ್ರಸಾದ ಲಬ್ಧಪ್ರಸಾದೆ ಶ್ರೀಮದುದಯಾದಿತ್ಯದೇವನರ್ಧಾಂಗಿಯ ರಪ್ಪ ಶ್ರೀಮತ್‌ಲಚ್ಚಲದೇವಿಯರ್ । "

ಇತ್ಯಾದಿವಾಕ್ಯಗಳು ಕೆತ್ತಲ್ಪಟ್ಟಿರುವುವು. ಈ ಶಾಸನದಲ್ಲಿ ಲಚ್ಚಲದೇವಿಗೆ " ಯಾಚಕಜನಜಂಗಮನಿಧಾನಕಳಸೆ " ಎಂಬ ವಿಶೇಷಣವು ಕೊಡ ಲ್ಪಟ್ಟಿರುವುದನ್ನು ವಿಮರ್ಶಿಸಿದರೆ, ಈ ರಾಣಿಯು ಮಹಾದಾನಶಾಲಿನಿ ಯಾಗಿದ್ದು ಭಿಕ್ಷುಕರಿಗೂ ಜಂಗಮರಿಗೂ ನಿಕ್ಷೇಪಕಲಶದಂತಿದ್ದಳೆಂದು ವ್ಯಕ್ತವಾಗುತ್ತದೆ. ಈ ರಾಣಿಯು (ಕ್ರಿ. ಶ. ೧೦೭೦) ರಲ್ಲಿದ್ದಳೆಂಬ ವಿಷಯವು ಈ ಶಾಸನದಿಂದಲೇ ತಿಳಿದುಬರುವುದು. ಈ ಶಾಸನವು ಬಸವನಿಗಿಂತಲೂ ೧೦೦ ವರ್ಷಗಳ ಮೊದಲನೆಯದಾಗಿರುವುದು.

ಮದ್ರಾಸ್ ಗವರ್ನಮೆಂಟಿನವರು ೧೯೩೩ ನೆಯ ಇಸ್ವಿಯಲ್ಲಿ ಪ್ರಕಟಿಸಿರುವ South-Indian Inscriptions (Volume IX Part I) " ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ " (ವಾಲ್ಯುಂ ೯. ಭಾಗ ೧) ಎಂಬ ಪುಸ್ತಕದ ೧೯೮ ನೆಯ ಪುಟದಲ್ಲಿ ಬಳ್ಳಾರಿ ಡಿ॥ ಹುವಿನಹಡಗಲಿ ತಾ॥ ಸೋಗಿ ಗ್ರಾಮದಲ್ಲಿ ದೊರೆತಿರುವ ಒಂದು ಶಾಸನವು ಮುದ್ರಿಸಲ್ಪಟ್ಟಿದೆ. ಈ ಶಾಸನವು ಚಾಲುಕ್ಯ ವಿಕ್ರಮಶಕ ೪೬ (ಕ್ರಿ. ಶ. ೧೧೨೧) ರಲ್ಲಿ ಬರೆಯಿಸಲ್ಪಟ್ಟಿದೆ. ಈ ಶಾಸನದ ಕೊನೆಯ ಭಾಗದಲ್ಲಿ ಈ ಮುಂದೆ ಉಲ್ಲೇಖಿಸಿರುವ ಪದ್ಯವು ಉಟ್ಟಂಕಿತವಾಗಿದೆ.

ಜಗದೊಳಗತ್ಯಪೂರ್ವದಿಟವೆ ದಿಟವಾವುದು ಸಾವಿತೀರ್ಥವಿಾ।
ಯುಗದೊಳ್ಮೂರ್ತಿಗೊಣ್ಡು ಬರವೀವುದು ಜಂಗಮತೀರ್ತ್ಥ
ಮಾಗಿ ಕೈ॥
ಮುಗಿಯಲುವೇಡ ಬಣ್ಣಿಸಲುಬೇಡ ಕೆಲಕ್ಕೆಡೆಯಾಡವೇಡ ನೀಂ।
ನಗುತ ಶರಣ್ಯವೆಂಡೆ ಬಗೆದಪ್ಪುದು ಬೇಪ್ರ್ಪದು ನಾಗವರ್ಮನ॥

ಈ ಪದ್ಯದಲ್ಲಿ ಶ್ರೀಸ್ವಾಮಿಯ ತೀರ್ಥವೇ ಈ ಯುಗದಲ್ಲಿ ಮೂರ್ತಿಗೊಂಡು ಜಂಗಮತೀರ್ಥವಾಗಿರುವುದೆಂಬ ಅಭಿಪ್ರಾಯವು ತೋರಿಸಲ್ಪಟ್ಟಿರುವುದು. ಇದರಿಂದ ಜಂಗಮರ ಪೂಜ್ಯತೆಯು ಪೂರ್ವಕಾಲದಲ್ಲಿ ವಿಶೇಷವಾಗಿತ್ತೆಂದೂ, ಆ ಕಾಲದ ಜನರು ಜಂಗಮರನ್ನು ಪ್ರತ್ಯಕ್ಷ ಶಿವನನ್ನಾಗಿ ತಿಳಿಯುತ್ತಿದ್ದರೆಂದೂ ಸ್ಪಷ್ಟವಾಗುತ್ತದೆ. ಈ ಶಾಸನವು ಬಸವನಿಗಿಂತ ೪೦ ವರ್ಷಗಳ ಮೊದಲನೆಯದಾಗಿದೆ.

ಬಿಜವಾಡದ ಇಂದ್ರಕೀಲಪರ್ವತದ ಮೇಲಿರುವ ಕನಕದುರ್ಗ ಮಂಟಪದ ಕಂಬದಲ್ಲಿ ಒಂದು ಶಾಸನವು ಕೆತ್ತಲ್ಪಟ್ಟಿದ್ದು, ಮದ್ರಾಸ್ ಗೌರ್ನಮೆಂಟಿನವರು ಮುದ್ರಿಸಿರುವ "South Indian Inscriptions" (Vol IV) "ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್" ೪ ನೆಯ ಭಾಗದ ೨೪೫ ನೆಯ ಪುಟದಲ್ಲಿ ಪ್ರಕಟಿಸಲ್ಪಟ್ಟಿರುವುದು. (A. R. No 308 of 1892) ಆ ಶಾಸನದಲ್ಲಿ ಕಪಿಲೇಶ್ವರನೆಂಬ ರಾಜನು ಒಂದು ನೂರುಜನ ಜಂಗಮಬ್ರಾಹ್ಮಣರ ಭೋಜನಕ್ಕಾಗಿ ಲಂಕಪಲ್ಲಿ ಮತ್ತು ವಾನರಪಲ್ಲಿ ಎಂಬ ಎರಡುಗ್ರಾಮುಗಳನ್ನು ದಾನ ಮಾಡಿದನೆಂದು ಉಲ್ಲೇಖಿಸಲ್ಪಟ್ಟಿರುವುದು. ಆ ಶಾಸನದಲ್ಲಿರುವ ಶ್ಲೋಕವು ಈ ಕೆಳಗೆ ಉದಾಹರಿಸಲ್ಪಟ್ಟಿರುವುದು.

ತತಃ ಕ್ಷೇತ್ರೇ ಬ್ರಾಹ್ಮಣಾಖ್ಯಜಂಗಮಾಂ ಶತಸಂಮಿತಂ।
ಭೋಜನಾರ್ಥಂ ಲಂಕಪಲ್ಲಿರ್ವಾನರಂ ಚ ನಿಯೋಜಿತಂ॥

ಈ ಶ್ಲೋಕಾಭಿಪ್ರಾಯವನ್ನು ವಿಚಾರಮಾಡಿನೋಡಿದರೆ, ಪೂರ್ವ ಕಾಲದಲ್ಲಿ ಜಂಗಮರು ಬ್ರಾಹ್ಮಣಾಭಿಧಾನದಿಂದ ಪರಮಪೂಜ್ಯತೆಯನ್ನು ಪಡೆದು ರಾಜಾಧಿರಾಜವಂದಿತರಾಗಿದ್ದರೆಂದು ಸ್ಪಷ್ಟವಾಗಿ ತೋರಿಬರುತ್ತದೆ. ಈ ರೀತಿ ಪೂರ್ವಕಾಲದಲ್ಲಿ ರಾಜಾಧಿರಾಜಪೂಜಿತರಾಗಿದ್ದ ಜಂಗಮ ವಂಶೀಯರು ಈ ಕಾಲದಲ್ಲಿ ಅತ್ಯಂತ ಹೀನಾವಸ್ಥೆಗೆ ಒಳಗಾಗಿರುವುದನ್ನು ನೋಡಿದರೆ ಪರಮ ದುಃಖವೆನಿಸುತ್ತದೆ. ಬ್ರಾಹ್ಮಣೋತ್ತಮರಾದ ಜಂಗಮವಂಶೀಯರಲ್ಲಿ ಕೆಲವರು ಇತ್ತೀಚೆಗೆ ಅನಾದಿಕಾಲದಿಂದ ಬಂದಿದ್ದ ತಮ್ಮ ವೈದಿಕವೃತ್ತಿಗೆ ಜಲಾಂಜಲಿಯನ್ನು ಕೊಟ್ಟು, ತಮ್ಮ ಪವಿತ್ರ ವಂಶದ ಗೌರವದ ಕಡೆಗೆ ಲಕ್ಷ್ಯಗೊಡದೆ, ಹೊಟ್ಟೆಪಾಡಿಗಾಗಿ ಸರಕಾರಿ ಕೆಲಸದ ಆಶೆಯಿಂದ ಮನಬಂದಂತೆ ವರ್ತಿಸಹತ್ತಿರುವುದು ಅತ್ಯಂತ ಶೋಚನೀಯವಾಗಿದೆ. ಇದು ಕಾಲಮಹಿಮೆಯಲ್ಲದೆ ಬೇರೆಯಲ್ಲ. ಅಸ್ತು!

ವೀರಶೈವಮತದ ಮತ್ತು ವೀರಶೈವಮತಾಚಾರ್ಯರ ಕಾಲಮಾನದ ಬಗ್ಗೆ ಭ್ರಾಂತಿಯಿಂದಲೋ ಅಥವಾ ಅಸೂಯೆಯಿಂದಲೋ ಮನಬಂದಂತೆ ಲೇಖಗಳನ್ನು ಬರೆಯುತ್ತಿರುವ ಮಹಾಶಯರು ನಾನು ಈ ವರೆಗೆ ಪ್ರತಿಪಾದಿಸಿರುವ ಸಮಸ್ತವಿಷಯಗಳನ್ನೂ ನಿರ್ಮಲಹೃದಯದಿಂದ ಪರಿಶೀಲಿಸಿ, ವೀರಶೈವ ಮತಸ್ಥಾಪಕರಾದ ಶ್ರೀಜಗದ್ಗುರು ಪಂಚಾಚಾರ್ಯರು ಬಹು ಪುರಾತನಕಾಲದವರೆಂದು ನಂಬಿ ಶ್ರೀಪರಮೇಶ್ವರನ ಕೃಪೆಗೆ ಪಾತ್ರರಾಗ ಬೇಕೆಂದಾಶಿಸುತ್ತೇನೆ.

# ಶ್ರೀಕಾಶೀನಾಥಗ್ರಂಥಮಾಲೆಯಲ್ಲಿ ಪ್ರಕಟವಾಗಿರುವ ಗ್ರಂಥಗಳು

ಪುಷ್ಪ

| ಪುಷ್ಪ | ಗ್ರಂಥ | ಆವೃತ್ತಿ | ಬೆಲೆ |
|---|---|---|---|
| ೧ | ವೈದಿಕವಾಙ್ಮಯರಹಸ್ಯ | .... | ೪ ಆಣೆ. |
| ೨ | ಸಚಿತ್ರರೇಣುಕವಿಜಯ | (೨ ನೆಯ ಆವೃತ್ತಿ) | ೧॥ ರೂ. |
| ೩ | ರೇಣುಕಾಚಾರ್ಯಶತಕ | (೨ ನೆಯ ಆವೃತ್ತಿ) | ೨ ಆಣೆ. |
| ೪ | ಮಾಹೇಶ್ವರದೀಕ್ಷಾವಿಧಿ | (೨ ನೆಯ ಆವೃತ್ತಿ) | ೧೨ ಆಣೆ. |
| ೫ | ವೀರಶೈವರತ್ನ | (೫ ನೆಯ ಆವೃತ್ತಿ) | ೨ ರೂ. |
| ೬ | ಸಿದ್ಧಾಂತಶಿಖೋಪನಿಷದ್ಭಾಷ್ಯ | .... | ೧ ರೂ. |
| ೭ | ಸಿದ್ಧಾಂತಸಾರಾವಳಿ | .... | ೧೨ ಆಣೆ. |
| ೮ | ಬಸವಧ್ವಾಂತದಿವಾಕರ | (೨ ನೆಯ ಆವೃತ್ತಿ) | ೮ ಆಣೆ. |
| ೯ | ಆಗಮಪರಿಜ್ಞಾನ | .... | ೮ ಆಣೆ. |
| ೧೦ | ಗೋತ್ರಸೂತ್ರಪಟ | (೬ ನೆಯ ಆವೃತ್ತಿ) | ೧ ಆಣೆ. |
| ೧೧ | ಪಂಚಾಚಾರ್ಯಾಷ್ಟೋತ್ತರ ಶತನಾಮಾವಳಿ | (೨ ನೆಯ ಆವೃತ್ತಿ) | ೨ ಆಣೆ. |
| ೧೨ | Speeches by Pandit Shri Kāshināthashāstriji *(in English)* | | 12 As. |
| ೧೩ | ಪಂಡಿತಶ್ರೀಕಾಶೀನಾಥಶಾಸ್ತ್ರುಲವಾರಿ ಭಾಷಣಮು (ತೆಲುಗು) | | ೮ ಆಣೆ. |
| ೧೪ | ಶಿವಶಕ್ತಿವಿಲಾಸ | .... | ೨ ಆಣೆ. |
| ೧೫ | ಬಸವಾದಿನಿಜತತ್ವದರ್ಪಣ | (೪ ನೆಯ ಆವೃತ್ತಿ) | ೨ ಆಣೆ. |
| ೧೬ | ಸಂಕ್ಷಿಪ್ತ ಶಿವಪೂಜಾವಿಧಿ | (೮ ನೆಯ ಆವೃತ್ತಿ) | ೨ ಆಣೆ. |
| ೧೭ | ಸನ್ಯಾಸಾಶ್ರಮವಿಮರ್ಶ (ಸಂಸ್ಕೃತ) | (೩ ನೆಯ ಆವೃತ್ತಿ) | ೧ ಆಣೆ. |
| ೧೮ | ರೇಣುಕವಿಜಯಪುರಾಣ | .... | ೨ ರೂ. |
| ೧೯ | ಪಂಚಾಚಾರ್ಯಸ್ತೋತ್ರರತ್ನಾಕರ | .... | ೧೨ ಆಣೆ. |
| ೨೦ | ಶ್ರೀಗುರುತತ್ತ್ವಪದಗಳು | (೨ ನೆಯ ಆವೃತ್ತಿ) | ೨ ಆಣೆ. |
| ೨೧ | ವೀರಶೈವಾಚಾರವಿಧಿ | (೪ ನೆಯ ಆವೃತ್ತಿ) | ೪ ಆಣೆ. |
| ೨೨ | ಶಿವಾದ್ವೈತಮಂಜರಿ (೧೩೪೪ ಪುಟಗಳು) | .... | ೮ ರೂ. |
| ೨೩ | ಶಿಖಾಸೂತ್ರಸಿದ್ಧಾಂತದರ್ಪಣ | .... | ೧೨ ಆಣೆ. |
| ೨೪ | ಸನ್ಯಾಸಾಶ್ರಮವಿಮರ್ಶತತ್ತ್ವಸ್ಥಿರೀಕರಣ | (೩ ನೆಯ ಆವೃತ್ತಿ) | ೬ ಆಣೆ. |
| ೨೫ | ಶ್ರೀರುದ್ರಮುನೀಶ್ವರಶತಕ | .... | ೨ ಆಣೆ. |

| | | | |
|---|---|---|---|
| ೨೬ | ವೈದಿಕಶಿವಪೂಜಾವಿಧಿ | (೨ ನೆಯ ಆವೃತ್ತಿ) | ೧। ರೂ. |
| ೨೭ | ವಿವಾಹವಿಧಿ | (೪ ನೆಯ ಆವೃತ್ತಿ) | ೪ ಆಣೆ. |
| ೨೮ | ಶ್ರೀಪಂಚಾಚಾರ್ಯಮಂಗಲಸ್ತೋತ್ರಾವಳಿ | (೧೦ ನೆಯ ಆವೃತ್ತಿ) | ೨ ಆಣೆ. |
| ೨೯ | नंदिकेश्वरकारिका (संस्कृत) | .... | २ आणे. |
| ೩೦ | ಸಿದ್ಧಾಂತಶಿಖಾಮಣಿ (ಕನ್ನಡಟೀಕಾಸಹಿತ) | .... | ೨ ರೂ. |
| ೩೧ | ಸಿದ್ಧಾಂತಶಿಖಾಮಣಿ (ಮೂಲಮಾತ್ರ ಚಿಕ್ಕಸೈಜು) | | ೮ ಆಣೆ. |
| ೩೨ | A Brief life-sketch of Pandit Shri Kāshinātha Shāstriji *(in English)* | | As. 4 |
| ೩೩ | वीरशैवरत्न (मराठि) | .... | १. रु. |
| ೩೪ | ವೀರಶೈವಮಹಾತ್ಮರು | .... | ೮ ಆಣೆ. |
| ೩೫ | ಶ್ರೀಪತಿಪಂಡಿತಾರಾಧ್ಯರ ಕಾಲನಿರ್ಣಯ | .... | ೪ ಆಣೆ. |
| ೩೬ | ಶ್ರೀಕರಭಾಷ್ಯ (ಚತುಸ್ಸೂತ್ರೀ-ಸಂಸ್ಕೃತ) | .... | ೧॥ ರೂ. |
| ೩೭ | Shakti-Vishistadvaita or The Philosophical Aspect of Veerasaivism *(in English)* | | As. 8 |
| ೩೮ | ಲಿಂಗಧಾರಣವಿಧಿ | .... | ೪ ಆಣೆ. |
| ೩೯ | ಶಿವಾದ್ವೈತಪರಿಭಾಷಾ (ಸಂಸ್ಕೃತ) | .... | ೮ ಆಣೆ. |
| ೪೦ | ಚಂದ್ರಜ್ಞಾನಾಗಮ | ಶಿವಾಗಮಸಂಗ್ರಹಃ (ಸಂಸ್ಕೃತ) | ೨ ರೂ. |
| ೪೧ | ಕಾರಣಾಗಮ | | |
| ೪೨ | ಮಕುಟಾಗಮ | | |
| ೪೩ | ಸೂಕ್ಷ್ಮಾಗಮ | | |
| ೪೪ | ಪಂಚಾಚಾರಪ್ರಕಾಶಿಕಾ | .... | ೩ ಆಣೆ. |
| ೪೫ | ಬಿಲ್ವಮಾಹಾತ್ಮ್ಯ | .... | ೩ ಆಣೆ. |
| ೪೬ | ಶೈವೋಪನಿಷತ್ಸಂಗ್ರಹ (ಸಂಸ್ಕೃತ) | .... | ೪ ಆಣೆ. |
| ೪೭ | ವೀರಶೈವಪ್ರಾಯಶ್ಚಿತ್ತವಿಧಿ | .... | ೪ ಆಣೆ. |
| ೪೮ | ವೀರಶೈವಾಂತ್ಯೇಷ್ಟಿ—ಶ್ರಾದ್ಧವಿಧಿ | .... | ೬ ಆಣೆ. |
| ೪೯ | ಪಂಚಾಚಾರ್ಯಪ್ರಕಾಶ | .... | ೩ ಆಣೆ. |
| ೫೦ | ಶ್ರೀಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ | | ೧ ರೂ. |

ಮ್ಯಾನೇಜರ್—ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

